# ಸಿದ್ಧಗಂಗಾ

ಸಂಪುಟ–28. ಸಂಚಿಕೆ–4. ಏಪ್ರಿಲ್–1992.




ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ 85ನೇ ಗುರುವಂದನ ಸಮಾರಂಭವನ್ನು (1-4-1992) ಉದ್ಘಾಟಿಸಿದ ರಾಜ್ಯದ ಮುಖ್ಯ ಮಂತ್ರಿ ಶ್ರೀ ಎಸ್. ಬಂಗಾರಪ್ಪ ಮತ್ತು ಅಧ್ಯಕ್ಷತೆ ವಹಿಸಿದ್ದ ತರಳಬಾಳು ಬೃಹನ್ಮಠದ ಡಾ|| ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯಸ್ವಾಮಿಗಳನ್ನು ಕಾಣಬಹುದು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.



ಸಿದ್ಧಗಂಗಾ ಜಾತ್ರೆಯ ಅಂಗವಾಗಿ ಏರ್ಪಡಿಸಿದ್ದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ರಾಜ್ಯದ ಕಾಮಗಾರಿ ಸಚಿವ ಶ್ರೀ ಜಿ. ಎಚ್. ಅಶ್ವತ್ಥರೆಡ್ಡಿ ಅವರು ಸಮಾರೋಪ ಭಾಷಣ ಮಾಡಿದರು. ಪರಮ ಪೂಜ್ಯರು ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಪರಿಷತ್ ಮುಖ್ಯ ಕಾರ್ಯದರ್ಶಿ ಶ್ರೀಮತಿ ಅಮಿತಾಪ್ರಸಾದ್ ಜೈನ್ ಉಪಸ್ಥಿತರಿದ್ದರು.

# ಸಿದ್ಧಗಂಗಾ

ಸಂಪುಟ - 28. ಸಂಚಿಕೆ - 4. ಏಪ್ರಿಲ್ - 1992.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಶೀಲ ಸೌಭಾಗ್ಯವೆ ನೀತಿ ನೈರ್ಮಲ್ಯವೆ
ಅರಿವು ಆಚಾರಗಳ ಶಿವಗಿರಿಯೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§§ §§ §§

ಅನುಭಾವ ಅನುಭಾವ ನುಡಿಯೆಲ್ಲ ಅನುಭಾವ
ಅನುಭಾವ ಅನುಭಾವ ನಡೆಯೆಲ್ಲ । ನನ್ನತಂಡೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§§ §§ §§

"ಮಾತು ಮುತ್ತಿನ ಮಳೆ ನೀತಿ ರತ್ನದ ರಾಶಿ"
ಜ್ಯೋತಿ ಜೀವನವಾಯ್ತು ಬದುಕೆಲ್ಲ । ನನ್ನತಂಡೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

ಐ ಐ ಐ

ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ



**ಹಳ್ಳದ ನೀರು, ಕಾಡುಪತ್ರೆ; ಸ್ಮಶಾನದ ಬೂದಿ ..........**

ಸ್ಕಾಂದ ಪುರಾಣದಲ್ಲಿ ಒಂದು ಕಥೆ ಬರುತ್ತದೆ. ಒಬ್ಬ ಗುರುವಿನಬಳಿಗೆ ಗ್ರಾಮೀಣ ಮುಗ್ಧನೊಬ್ಬ ಬರುತ್ತಾನೆ. ಸ್ವಾಮಿ ಪೂಜೆಮಾಡುವುದಕ್ಕೆ ಏನುಬೇಕು ಎಂದು ಕೇಳುತ್ತಾನೆ. ಗುರುಗಳು ಬಂದ ವ್ಯಕ್ತಿಯನ್ನು ನೋಡುತ್ತಾರೆ. ಕೊಂಚ ಉದಾಸೀನದಿಂದಲೇ ಅವನಿಗೆ ಹೇಳುತ್ತಾರೆ ಪೂಜೆಗೆ ಇನ್ನೇನು ಬೇಕಯ್ಯಾ, ಹಳ್ಳದ ನೀರು, ಕಾಡುಪತ್ರೆ, ಸ್ಮಶಾನದ ಬೂದಿ ಸಾಕು ಎನ್ನುತ್ತಾರೆ. ಬಂದಾತನಿಗೆ ಪರಮಾನಂದವಾಗುತ್ತದೆ. ಎಷ್ಟೊಂದು ಸುಲಭ ಪೂಜಾವಸ್ತುಗಳು ಎನ್ನಿಸುತ್ತದೆ. ಅದರಂತೆ ನಿತ್ಯವೂ ಪೂಜೆ ಮಾಡಲು ಪ್ರಾರಂಭಿಸುತ್ತಾನೆ. ದಿನ ದಿನಕ್ಕೆ ಅವನ ನಿಷ್ಠೆ ಗಟ್ಟಿಗೊಳ್ಳುತ್ತ ಬರುತ್ತದೆ. ಪೂಜೆಯ ಸಮಯದಲ್ಲಿ ಅವನ ಮನಸ್ಸು ಏಕಾಗ್ರವಾಗುತ್ತ ವೃದ್ಧಿಸುತ್ತಾ ಹೋಗುತ್ತದೆ. ಗುರು ವಾಕ್ಯವನ್ನು ನಂಬಿ ಮುಂದುವರಿಯುತ್ತಾನೆ. ಇವನ ನಿಷ್ಠೆಯನ್ನು ಪರೀಕ್ಷೆ ಮಾಡಬೇಕೆಂದು ದೇವರು ಯೋಚಿಸುತ್ತಾನೆ. ಒಂದು ದಿನ ಇವನ ಪೂಜೆಗೆ ಬೇಕಾದ ಸ್ಮಶಾನದ ಬೂದಿ ಸಿಕ್ಕದ ಹಾಗೆ ಮಾಡುವ ಉಪಾಯ ಮಾಡುತ್ತಾನೆ. ಪೂಜೆಗೆ ಹಳ್ಳದ ನೀರು, ಕಾಡುಪತ್ರೆ ದೊರೆಯದೆ ಅತ್ಯಂತ ಭಾರಿಮಳೆಯನ್ನು ಸುರಿಸುತ್ತಾನೆ. ಎಲ್ಲೆಲ್ಲೂ ಮಳೆ. ಮುಗಿಲೇ ಹರಿದು ಬಿದ್ದಿತೇನೋ ಎನ್ನುವಂತಹ ಜೋರು ಮಳೆ. ಭೂಲೋಕವೆಲ್ಲ ಜಲಮಯ. ಭಕ್ತನಿಗೆ ಯೋಚನೆಗಿಟ್ಟುಕೊಳ್ಳುತ್ತದೆ. ಸ್ಮಶಾನದ ಬೂದಿ ಇಲ್ಲದೆ ಪೂಜೆಮಾಡುವುದೆಂತು? ಎಂದು

ಅವನ ಪತ್ನಿ ಕೇಳುತ್ತಾಳೆ. ಏನು ಯೋಚಿಸುತ್ತಿದ್ದೀರಿ ? ಎಂಬುದಾಗಿ. ಭಕ್ತನ ಉತ್ತರ – ಪೂಜೆಗೆ ಸ್ಮಶಾನದ ಬೂದಿ ಇಲ್ಲವಾಗಿದೆಲ್ಲಾ ಏನು ಮಾಡಲಿ ಹೇಳು ಎನ್ನುತ್ತಾನೆ. 'ಅದಕ್ಕೇಕೆ ಯೋಚನೆ ನಮ್ಮಗುಡಿಸಿಲು ಇದೆಯಲ್ಲ ? ಅದರೊಳಗೆ ನಾನು ಕುಳಿತುಕೊಳ್ಳುತ್ತೇನೆ. ನೀವು ಬೆಂಕಿ ಹಚ್ಚಿಬಿಡಿ ಸುಟ್ಟಮೇಲೆ ಸ್ಮಶಾನದ ಬೂದಿ ದೊರೆಯುತ್ತದೆ. ಪೂಜೆಮಾಡಿ' ಎನ್ನುತ್ತಾಳೆ. ಭಕ್ತನಿಗೆ ಆನಂದವಾಗುತ್ತದೆ. ಹಾಗೇಆಗಲಿ ಎಂದು ಪತ್ನಿಯನ್ನು ಗುಡಿಸಿಲೊಳಗೆ ಕೂರಿಸಿ ಬೆಂಕಿ ಹಚ್ಚುತ್ತಾನೆ. ಪೂರ್ಣ ಬೆಂದು ಬೂದಿಯಾದನಂತರ ಆ ಬೂದಿಯನ್ನು ತೆಗೆದುಕೊಂಡು ಪೂಜೆಗೆ ಆರಂಭಿಸುತ್ತಾನೆ. ಆನಂದವಾಗಿ ಹಾಡುತ್ತಾ ಬೂದಿಯನ್ನು ಮೈಗೆಲ್ಲಾ ಲೇಪಿಸಿಕೊಳ್ಳುತ್ತಾ ಕಾಡುಪತ್ರೆಯನ್ನು ಲಿಂಗಕ್ಕೆ ಧರಿಸುತ್ತಾ ಭಕ್ತಿಯಿಂದ ಪೂಜಿಸುತ್ತಾನೆ. ಅದನ್ನು ಕಂಡ ದೇವರು ಇಂಥ ಮುಗ್ಧರು ಉಂಟೆ ? ಎಂದು ಹರ್ಷಭಾಷ್ಪಿತನಾಗಿ ಪ್ರತ್ಯಕ್ಷನಾಗುತ್ತಾನೆ. ಭಕ್ತ ಕಣ್ತೆರೆದು ಪರಮಾತ್ಮನನ್ನು ಕಂಡು ನಮಸ್ಕರಿಸುತ್ತಾನೆ. ದೇವರು ಕೇಳುತ್ತಾನೆ. "ನಿನ್ನ ಪೂಜೆ ಒಪ್ಪಿತವಾಗಬೇಕಾದರೆ ನೀನು ನಿನ್ನ ಪತ್ನಿಯೊಂದಿಗೆ ಬಂದು ಪೂಜಿಸಬೇಕು" ಎಂದು. ಆಗ ನೆನಪಾಗುತ್ತದೆ ಆ ಭಕ್ತನಿಗೆ ತನ್ನ ಪತ್ನಿಯನ್ನು ತಾನೆ ಬೆಂಕಿಯಿಟ್ಟು ಬೂದಿಮಾಡಿದೆನಲ್ಲಾ ಎಂದು. ದೇವರೇ ಹೇಳುತ್ತಾನೆ. ಪೂಜೆ ಮಾಡುವಾಗ ಹೇಗೆ ನಂಬಿ ಏಕನಿಷ್ಠೆಯಿಂದ ಇರುತ್ತಿದ್ದೆಯೋ ಅದೇ ನಿಷ್ಠೆಯಿಂದ ನಿನ್ನ ಪತ್ನಿಯನ್ನು ಕೂಗಿದರೆ ಬಂದಾಳು ಎಂದಾಗ ಭಕ್ತ ಕರೆಯುತ್ತಾನೆ. ಆತನ ಪತ್ನಿ "ಕರೆದಿರಾ ಸ್ವಾಮಿ" ಎಂದು ನಗುನಗುತ್ತಾ ಬರುತ್ತಾಳೆ. ಭಕ್ತಿಯಿಂದೂ ಆಗದ ಕೆಲಸವಾವುದ ಇಲ್ಲ. ನಂಬಿಕೆ ಬೇಕು ಎಲ್ಲಾವುದಕ್ಕೂ. 'ನಂಬಿಕರೆದರೆ ಓ ಎನ್ನನೆ ಶಿವನು' ಎಂಬ ಅಣ್ಣನವರ ಮಾತಾಗಲಿ, "ನಂಬಿಕೆಟ್ಟವರಿಲ್ಲವೋ ರಂಗಯ್ಯನ" ಎಂಬ ದಾಸರವಾಣಿಯಾಗಲಿ ಜೀವನದ ದಾರಿದೀಪಗಳೆಂಬುದನ್ನು ತಿಳಿದು ಬಾಳುವ ಕಲೆಯನ್ನು ತಿಳಿಯಬೇಕು. **ದೇವರಿಗೆ ಬೇಕಾದುದು ಜ್ಞಾನ ಜಡತೆಯಲ್ಲ, ಭಕ್ತಿ ಮುಗ್ಧತೆ.**

(9. 4. 92 ರಂದು ಬೀರನಹಳ್ಳಿನಲ್ಲಿಮಾಡಿದ ಉಪನ್ಯಾಸದಿಂದ ಸಂಗ್ರಹಿಸಿದ್ದು.)

# ಶ್ರೀ ಸಿದ್ಧಲಿಂಗೇಶ್ವರ ವಚನ



ಸುರತರುವು ವೃಕ್ಷದೊಳಗಲ್ಲ, ಸುರಧೇನು ಪಶುವಿನೊಳಗಲ್ಲ,
ಪರುಷ ಪಾಷಾಣದೊಳಗಲ್ಲ, ಶಿಷ್ಯನ ಭಾವಕ್ಕೆ ಗುರು-ನರನಲ್ಲ
ಗುರುವೇ ಪರಮೇಶ್ವರನೆಂದು ಭಾವಿಸಬಲ್ಲಡೆ ಶಿಷ್ಯನೆಂಬೆನಯ್ಯ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

ಗುರುವೆಂದರೆ ಜ್ಞಾನಸಾಗರ. ಸಚ್ಛಿಷ್ಯನ ಮುಖ ಚಂದ್ರದರ್ಶನದಿಂದ ಆ ಜ್ಞಾನಸಾಗರ ಉಕ್ಕೇರುವುದು. ಮರೆವೆಯ ಕತ್ತಲೆಯಲ್ಲಿ ಕೈಯಾಡಿಸುತ್ತ ಕುಳಿತವನ ಕೈಹಿಡಿದು ಕರುಣೆಯಿಂದ ಅರುವಿನ ಮಹಾಬೆಳಕಿನತ್ತ ಎಳೆದೊಯ್ಯುವ ಸದ್ಗುರುವಿನ ಕೃಪೆಗೆ ಪಾತ್ರರಾಗುವುದಕ್ಕಿಂತ ಈ ಲೋಕದಲ್ಲಿ ಮತ್ತಾವ ಹೆಚ್ಚಿನ ಭಾಗ್ಯವಿದೆ ? ನಿರಾಕಾರನಾದ ಶಿವನು ಭಕ್ತರ ಕಲ್ಯಾಣಕ್ಕಾಗಿ ಸಾಕಾರನಾಗಿ ಬಂದರೆ "ಗುರು"ಎನಿಸುವನು. ಅಂಥವನ ಕೃಪೆಯನ್ನು ಪಡೆಯುವ ಕ್ಷಣವು ಜೀವನದ ಕೃತಾರ್ಥತೆಯ ಮಂಗಲ ಕ್ಷಣವು. ಯಾವಾತನ ಜ್ಞಾನಶಕ್ತಿಯ ಪಾತದಿಂದ ಶಿಷ್ಯನಲ್ಲಿ ಸುಪ್ತವಾಗಿದ್ದ ಜ್ಞಾನಶಕ್ತಿಯು ಎಚ್ಚೆತ್ತು ಅವನಿಗೆ ತನ್ನ ಆನಂದಮಯ ಜೀವನದ ಅಮರತ್ವದ ಲಾಭವಾಗುವುದೋ ಅಂತಹ ಗುರುವಿನ ಮಹತ್ವವನ್ನು ಯಾರು ಬಣ್ಣಿಸಬಲ್ಲರು ! ಅಂತೆಯೇ ಗುರು-ಶಿಷ್ಯ ಸಂಬಂಧ

ವೆಂಬುದು ಕೇವಲ ಎರಡು ವ್ಯಕ್ತಿಗಳಲ್ಲಿರುವ ಪರಿಚಯಮಾತ್ರವಲ್ಲ. ಅದರಲ್ಲಿ ಆತ್ಮಜ್ಞಾನ ಜ್ಯೋತಿಯನ್ನು ಬೆಳಗಿಸಬಲ್ಲ ಒಂದು ಅಲೌಕಿಕತೆ ತುಂಬಿರುವುದು ಅದಕ್ಕಾಗಿ ಸದ್ಗುರುವನ್ನು ಸಚ್ಛಿಷ್ಯನು ಹಸ್ತಪಾದಾದಿಗಳ ಸಾಮ್ಯಾದಿಂದ ಸಾಮಾನ್ಯ ಮನುಷ್ಯನಲ್ಲಿ ಗಣಿಸಲಾರನೆಂಬುದನ್ನು ಸಿದ್ಧಲಿಂಗ ಶಿವಯೋಗಿಗಳು ದೃಷ್ಟಾಂತ ಮೂಲಕ ಅಪ್ಪಣೆ ಕೊಡಿಸಿರುವರು.

ಕಲ್ಪವೃಕ್ಷವು ನೋಡಲಿಕ್ಕೆ ಗಿಡದಂತೆ ಕಂಡರೂ ಅದನ್ನು ಸಾಮಾನ್ಯ ಗಿಡಗಳಲ್ಲಿ ಗಣಿಸಲಾಗುವುದಿಲ್ಲ, ಕಾಮಧೇನುವು ಆಕಳಂತೆ ಕಂಡರೂ ಅದನ್ನು ಸಾಮಾನ್ಯ ಪಶುಗಳಲ್ಲಿ ಎಣಿಸಲಾಗುವುದಿಲ್ಲ. ಪರುಷಮಣಿಯು ಕಲ್ಲಿನಂತೆ ಕಂಡರೂ ಅದನ್ನು ಸಾಮಾನ್ಯ ಕಲ್ಲುಗಳಲ್ಲಿ ಸೇರಿಸಲು ಬರುವುದಿಲ್ಲ. ಇದರಂತೆಯೇ ಸದ್ಗುರುವು ನೋಡಲು ಮನುಷ್ಯನಂತೆ ಕಂಡರೂ ಆತನನ್ನು ಮನುಷ್ಯರಲ್ಲಿ ಗಣಿಸಲು ಬಾರದು ಎಂಬುದೇ ನಿಜಶಿಷ್ಯನ ಭಾವವಾಗಿರುವುದು. ಗುರುವನ್ನು ಪ್ರತ್ಯಕ್ಷ ಶಿವನೆಂದು ತಿಳಿಯ ಬಲ್ಲವನೇ ನಿಜಶಿಷ್ಯನು. ಅವನೇ ಗುರುಕೃಪೆಯನ್ನು ಪಡೆದು ಜೀವನದ ಮೌಲ್ಯವನ್ನೂ; ಅದರ ಪರಮೋದ್ಧೇಶವನ್ನು ಸಾಧಿಸಿ ಕೃತಾರ್ಥನಾಗುವನು.

(ಕೃಪೆ:- ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗೀಶ್ವರರು ನಿರೂಪಿಸಿದ ಷಟ್‌ಸ್ಥಲ ಜ್ಞಾನಸಾರಾಮೃತ, ಪ್ರಕಾಶಕರು:- ಶ್ರೀ ತೋಂಟದಸಿದ್ಧಲಿಂಗೇಶ್ವರ ಸೇವಾಸಂಘ, ಎಡೆಯೂರು ಗದಗ)

# ಸಂಪಾದಕೀಯ

**ಪರೀಕ್ಷೆಗಳು**

ಏಪ್ರಿಲ್ ತಿಂಗಳು ಬಂದಿತೆಂದರೆ ಪರೀಕ್ಷೆಗಳು ಪ್ರಾರಂಭ. ವರ್ಷದಉದ್ದಕ್ಕೂ ಕಲಿತದ್ದನ್ನು ಪರೀಕ್ಷೆಗಳ ಮೂಲಕ ವ್ಯಕ್ತಪಡಿಸುವ ತರಾತುರಿ. ವಿದ್ಯಾರ್ಥಿಯ ಸಾಧನೆಯನ್ನು ಗುರುತಿಸಲು ಮಾಡಿರುವ ವ್ಯವಸ್ಥೆ ಉದ್ದೇಶ ಶುದ್ಧ ಸ್ಪಟಿಕದಷ್ಟು ಶುಭ್ರ. ಆದರೆ ನಡೆದಿರುವುದೆಲ್ಲ ತದ್ವಿರುದ್ಧ. ಎಲ್ಲ ಹಂತಗಳಲ್ಲೂ ಭ್ರಷ್ಟತೆಯ ಭೂತನರ್ತನ. ಅಧ್ಯಾಪಕ, ವಿದ್ಯಾರ್ಥಿ, ಪಾಲಕ, ಆಡಳಿತಯಂತ್ರ ಎಲ್ಲಮುಖಗಳೂ ಕಪ್ಪುಕಲೆಯನ್ನೇ ಪ್ರದರ್ಶಿಸುತ್ತಿವೆ. ಮೇಲು ನೋಟಕ್ಕೆ ಅದೆಷ್ಟು ನೀತಿ ಸಂಹಿತೆಯನ್ನು ಘೋಷಿಸುವ ಸಾಹಿತ್ಯ ಸಂಪುಟ, ಜಾಗೃತದಳಗಳ ಆಕರ್ಷಕ ಜಾತ್ರೆ, ಜಿಲ್ಲಾಧಿಕಾರಿ, ಜಿಲ್ಲಾರಕ್ಷಣಾಧಿಕಾರಿಗಳಾದಿಯಾಗಿ ತಪ್ಪಿತಸ್ಥರನ್ನು ಪತ್ತೆಹಚ್ಚುವ ಅಶ್ವಮೇಧಯಾಗ, ನಗರ, ಗ್ರಾಮ ಎಂಬ ಭೇದವಿಲ್ಲದೆ ನಡೆದಿರುವ ಪರೀಕ್ಷಾ ದುರ್ವ್ಯವಹಾರಗಳ ಆಕರ್ಷಣೀಯ ತಲೆಬರೆಹಗಳ ಪತ್ರಿಕಾವಾರ್ತೆ. ರಾಷ್ಟ್ರದ ಎಲ್ಲಸಮಸ್ಯೆಗಳಿಗಿಂತ ಬಹುದೊಡ್ಡಸಮಸ್ಯೆ ಇದೆಂಬುದನ್ನು ಎಲ್ಲ ಅರಿಯದಹೊರತು ಯುವಜನಾಂಗದ ಭವಿಷ್ಯಕ್ಕೆ ಬೆಳಕಿಲ್ಲ. ನಮಗಿರುವ ಬೇರೆಲ್ಲ ಸಮಸ್ಯೆಗಳು ಈ ದುರ್ವ್ಯವಹಾರ ಸಮಸ್ಯೆಯಮುಂದೆ ಕೇವಲ ಕ್ಷುದ್ರವೆಂಬುದನ್ನು ನಾವೇಕೆ ತಿಳಿದಿಲ್ಲ ? ಕಾವೇರಿಯ ಸಮಸ್ಯೆಗಿಂತ, ಬೆಲೆಏರಿಕೆಯ ಸಮಸ್ಯೆಗಿಂತ, ನಗರ ಜೀವನಗಳ ಉಸಿರುಕಟ್ಟಿಸುವ ಜನಸಂಖ್ಯಾಸ್ಫೋಟಸಮಸ್ಯೆಗಿಂತ, ದಿನಬೆಳಗಾದರೆ ಪತ್ರಿಕೆಗಳಲ್ಲಿ ಕಾಣುವ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಾವನ್ನಪ್ಪುತ್ತಿರುವ ದುರ್ದೈವಿಗಳ ಸಮಸ್ಯೆಗಿಂತ ಬೃಹದಾಕಾರವಾದುದು ಪರೀಕ್ಷಾದುರ್ವ್ಯವಹಾರಸಮಸ್ಯೆ. ಯುವಜನಾಂಗವನ್ನು ಯಾವುದಾದರೂ ಅತ್ಯಾಧುನಿಕವಾದ ಮಾರಕಾಸ್ತ್ರವನ್ನು ಬಳಸಿ ಕೊಲೆಮಾಡುವುದಕ್ಕಿಂತ ಘನಘೋರವಾದ ಪಾಪಕರ ಇದು. ಇದರಲ್ಲಿ ಆತ್ಮಶೋಧನೆಯೊಂದೇ ಅಗತ್ಯವಾದ ಪರಿಹಾರ. ಯಾರೊಬ್ಬರ ಮೇಲೂ, ಯಾವುದೇ ಒಂದು ವರ್ಗದಮೇಲೂ ಜವಾಬ್ದಾರಿಯನ್ನು ಸ್ಥಳಾಂತರಿಸುವಲ್ಲಿ ಪ್ರಯೋಜನವಿಲ್ಲ. ನಮ್ಮ ಮಕ್ಕಳಿಗೆ ನಾವೇ ವಿಷಉಣಿಸುತ್ತಿದ್ದೇವೆ ಎಂಬ ತಿಳಿವಳಿಕೆ ನಮಗೇಕೆ ಬರುತ್ತಿಲ್ಲ. ನಾಳೆ ಆ ಮಕ್ಕಳ ಭವಿಷ್ಯಕ್ಕೆ ಇಂಥ ಅಪಾಯದ ಮಾರ್ಗತೋರಿಸಬೇಕೆ ? ಇದಕ್ಕೆಲ್ಲಾ ಪರಿಹಾರವೇ ಇಲ್ಲವೇ ? ಗಾಂಧಿ ದೇಶದವರೆ ನಾವು ? ನಾಚಿಕೆಯಾಗ ಬೇಡವೇ ನಮಗೆ ? ಎಳೆಯಕಂದಮ್ಮಗಳ ಬಗ್ಗೆ ಗಂಭೀರ ಚಿಂತನೆ ಬೇಡವೇ ? ಮೊದಲು ನಮ್ಮ ನಮ್ಮ ಕೆಟ್ಟ ಮನಸ್ಸುಗಳನ್ನು ಒಂದಿಷ್ಟು 'ಸರಿಪಡಿಸಿಕೊಳ್ಳೋಣ. ನಾವು ಒಳ್ಳೆಯದನ್ನು ಬಿತ್ತಲಿಕ್ಕಾಗದಿದ್ದರೂ ಬೇಡ ಕೆಟ್ಟದ್ದನ್ನು ಬಿತ್ತುವುದು ಬೇಡ. "ಬೇವಿನ ಬೀಜವ ಬಿತ್ತಿ" ಮಾವಿನ ಹಣ್ಣನ್ನುವ ಭ್ರಮೆ ಬೇಡ. ಪರೀಕ್ಷೆ ಪಾವಿತ್ರ್ಯತೆಯ ಪ್ರಥಮ ಕಮ್ಮಟವಾಗುವಂತೆ ನೋಡಿಕೊಳ್ಳುವದಾದರೆ ಶಿಕ್ಷಣಕ್ಕಾಗಿ ಖರ್ಚು ಮಾಡುತ್ತಿರುವ ಕೋಟಿ ಕೋಟಿ ರೂಪಾಯಿಗಳು ಸಾರ್ಥಕವಾದಂತೆ. ದೇಶ ಭಾಗ್ಯವಂತ ಶೀಲಪೂರ್ಣ ಜನಾಂಗವನ್ನು ಕಂಡಂತಾದೀತು. ಅಪಾಯದ ಘಂಟೆ ಮೊಳಗುತ್ತಿದೆ ? ಎಚ್ಚರಿಕೆಯಿಂದ ಮುಂದುವರಿಯೋಣ.

**ಸಿದ್ಧಗಂಗಾ ಮಾಸ ಪತ್ರಿಕೆ**

**ಶ್ರೀ ಸಿದ್ಧಗಂಗಾ ಮಠ - 572 104**

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ್ರೊ|| ಚನ್ನಪ್ಪ ಎತೇಸೀವೊ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

**ಶ್ರೀ ಸಿದ್ಧಗಂಗಾಕ್ಷೇತ್ರ**

**ಚಂದಾ ವಿವರ**

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಬಸವ ತತ್ತ್ವ ರತ್ನಾಕರ-೧೧


ಶ್ರೀ ಮೋಟಗಿ ಮಲ್ಲಿಕಾರ್ಜುನ, 'ಕನ್ನಡಕವಿ ಕಾಳಿದಾಸ', ಅಥಣಿ, ಬೆಳಗಾವಿ ಜಿಲ್ಲೆ.


## ಶ್ರೀಮುರಗೋಡ ಮಹಾಂತ ಶಿವಯೋಗಿ—ಅಮೃತವಾಣಿ

**106**

**ಭಗವಂತನ ಸ್ವರೂಪ:** " ಜಗತ್ತಿನಲ್ಲಿ ಅನೇಕ ಮತಧರ್ಮಗಳು ಭಗವಂತನ ಸ್ವರೂಪವನ್ನು
ಸಾರುತ್ತಾ ಬಂದಿವೆ ನೋಡ್ರೆಪಾ!
ಆದರೆ ಆ ಮತ ಪಂಥಗಳ ಧರ್ಮಸಂಸ್ಥಾಪನಾಚಾರ್ಯರೆಲ್ಲರೂ
ತಾವು ತಿಳಿದ ಅಪೂರ್ವ ಜ್ಞಾನಾನುಭವದಿಂದ ಕಂಡಷ್ಟನ್ನೇ
ಪರಿಪೂರ್ಣ ವಸ್ತು (ಪರಬ್ರಹ್ಮ)ವೆಂದು ವಾದಿಸುತ್ತ ಬಂದರು ನೋಡ್ರೆಪಾ!
ಪರಮಾತ್ಮನ ಜ್ಞಾನ ಸಮುದ್ರದಲ್ಲಿ ಯಾರು ಕೊಳಗವನ್ನೊ,
ಯಾರು ಹಂಡೆಯನ್ನೊ, ಯಾರುಕೊಡವನ್ನೊ, ಯಾರುತಂಬಿಗೆಯನ್ನೊ,
ಯಾರು ಗಿಂಡಿಯನ್ನೊ ತುಂಬಿಕೊಂಡು ಬಂದು, ಇವರೆಲ್ಲರೂ ತಾವು ಪಡೆದ
ಗಿಂಡಿಯೊ ಅಥವಾ ಕೊಡವೊ ಅದರಲ್ಲಿನ ಅಲ್ಪ ಜ್ಞಾನ ಜಲವೇ
ಸಂಪೂರ್ಣ ದೇವಜ್ಞಾನಾನುಭವ ಸಾಗರವೆಂದು ಬೋಧಿಸುತ್ತ ನಡೆದರು ನೋಡ್ರೆಪಾ!
ಇದು ಹೇಗಾಯಿತೆಂದರೆ :

ಮುಂದೆ ನಿಂತ ಕುರುಡ ಆನೆಯ ಕಿವಿಹಿಡಿದುನೋಡಿ,
ಕರಿಯು ಮೊರದಂತೆ ಇದೆ ಎಂದ!
ಹಿಂದೆನಿಂದ ಹೆಳವ ಬಾಲಹಿಡಿದು ನೋಡಿ,
ಆನೆ ಸಣ್ಣ ಬಿದಿರಿನಂತೆ ಇದೆ ಎಂದ!
ಇನ್ನೊಬ್ಬ ಕಿವುಡ ಕಾಲು ಹಿಡಿದು ನೋಡಿ ಆನೆ ಕಂಬದಂತೆ ಇದೆ ಎಂದ!
ಬದಿಗೆ ನಿಂದ ಕುಳ್ಳನೊಬ್ಬ ಹೊಟ್ಟೆಯಮೇಲೆಕೈಯಾಡಿಸಿ ನೋಡಿ
ಆನೆ ಕಂಬಳಿಯಂತೆ ಇದೆ ಎಂದ!

ಮೂಗನೊಬ್ಬ ಸೊಂಡಿಲು ಹಿಡಿದುನೋಡಿ, ಆನೆಬಿದಿರು ಬೊಂಬಿನಂತೆ ಇದೆಎಂದ!
ಇಂತೀ ಮರುಳರೆಲ್ಲರೂ ಆನೆಯನು ವರ್ಣಿಸಿದಂತಾಯಿತ್ತು ನೋಡ್ರೆಪಾ!
ಆದರೆ ಶ್ರೀಬಸವಾದಿ ಪ್ರಮಥರು, ಅಥಣಿ ಶಿವಯೋಗಿಗಳು ನುಡಿದಂತೆನಡೆದು,
ತ್ರಿಕಾಲ ಜ್ಞಾನಿಗಳಾಗಿ, ಶಿವಸ್ವರೂಪಿಗಳಾಗಿ ಲೋಕವನ್ನು ಬೆಳಗುವರು ನೋಡ್ರೆಪಾ!"
'ಅರಭಾವಿ ಪುಣ್ಯಾರಣ್ಯದ ಮಹಾತಪಸ್ವಿಗಳಾದ,
ಮುರಗೋಡ ಮಹಾಂತ ಮಹಾ ಶಿವಯೋಗಿಗಳ
ಪವಿತ್ರ ಪರಮಪುಣ್ಯ ಸಂದೇಶವಿದು ಕೇಳಿರಯ್ಯ!

ಪರವಸ್ತು (ಪರಶಿವ-ಪರಬ್ರಹ್ಮ) ವೇ ಶ್ರೀಗಳು ತಾವಾಗಿ ನಿಂದು,
ಧರೆಯ ಮನುಕುಲಕೆ ಪರತತ್ತ್ವದಿರವು ಗೋಚರಿಸಲೆಂದು,
ಕರುಣಿಸಿದ ಅಮೃತತುಲ್ಯ ದಿವ್ಯಜ್ಞಾನ ಸಂದೇಶವೊಂದು,
ಒರೆದ "ಧರ್ಮಜ್ಞ" "ಕನ್ನಡಕವಿಕಾಳಿದಾಸ" ವಚನಾಮೃತದೊಳಿಂದು,
ದೇವರಮಹಿಮೆ ದೇವರೇ ಬಲ್ಲನೈಸೆ ? ಹೇಳಾ,ಶ್ರೀ ಶೈಲಮಲ್ಲಿಕಾರ್ಜುನ. "

[107]

**ಮಯಾವಿಮುಕ್ತ:** "ಮಾನವನ ಬಂಧ-ಮೋಕ್ಷಗಳಿಗೆ ಮುಖ್ಯವಾಗಿಮನಸ್ಸೇಕಾರಣವಾಗಿದೆ.
ಈ ಮನದ ಹಿಂದಣ ಆಶೆಯೇ ಮಾಯೆ ನೋಡ್ರೆಪಾ!
"ಸುತ್ತಿಸುತ್ತಿ ಬಂದಡಿಲ್ಲ, ಲಕ್ಷಗಂಗೆಯ ಮಿಂದಡಿಲ್ಲ,
ತುಟ್ಟತುದಿಯ ಮೇರುಗಿರಿಯಮೆಟ್ಟಿ ಕೂಗಿದಡಿಲ್ಲ,
ನಿಚ್ಚಕ್ಕೆ ಮನವನಂದಂದಿಗೆ ಅತ್ತಿತ್ತ ಹರಿಯಲೀಯದೆ,
ಚಿತ್ತದಲ್ಲಿ ಧರಿಸಬಲ್ಲಡೆ, ಬಚ್ಚಬರಿಯಬೆಳಗು ಗುಹೇಶ್ವರ ಲಿಂಗವು." ಎಂದುದಾಗಿ
ಮನಸ್ಸನ್ನು ನಮ್ಮ ಸ್ವಾಧೀನ ಪಡಿಸಿಕೊಂಡಾಗ,
ನಮ್ಮ ತೊಡೆಯ ಮೇಲೆ ಆ ಹೆಣ್ಣು ಬಂದುಕುಳಿತು.
ಕುಣಿದಾಡಿದರೂ, ಅದರಿಂದ ನಮಗೇನಾಗಬಹುದ್ರೆಪಾ !
ಆದುದರಿಂದ ಈ ಮನಸ್ಸೆ ಸಕಲ ಪ್ರಪಂಚದ
ಸುಖ-ದುಃಖಗಳಿಗೆ ಕಾರಣವಾಗಿದೆ ನೋಡ್ರೆಪಾ! "
ಇಂತು ಪೂಜ್ಯ ನಿರಂಜನ ಪ್ರಣವ ಸ್ವರೂಪಿಗಳಾದ
ಮುರಗೋಡ ಶ್ರೀಮಹಾಂತ ಶಿವಯೋಗಿಗಳವರು
ಅಪ್ಪಣೆ ಕೊಡಿಸಲಾದ ದ್ವಿತೀಯ ವಚನಾಮೃತವಿದು
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ-"

(108)

**ಜನನ ಮರಣರಹಿತ ಶರಣ:** "ಪ್ರಮಥವರೇಣ್ಯರಾದ ಪ್ರಭು-ಬಸವಾದಿಗಳು
ತತ್ತ್ವ ಸ್ವರೂಪರು; ಪರಶಿವನ ಪ್ರತಿ ಮೂರ್ತಿಗಳು ನೋಡ್ರೆಪಾ!
ಲೋಕ ಹಿತಾರ್ಥವಾಗಿ ದೇವಮಾನವ ರೂಪದಲ್ಲಿ
ಧರೆಗಿಳಿದು ಬಂದವರು-ಇಂತಹ ಶಿವಶರಣರಿಗೆ
ಜನನ-ಮರಣಗಳ ಲೇಪವಿಲ್ಲ; ಮೃತ್ಯುವನ್ನು ಜಯಿಸಿ ನಿಂದವರು.
ಅಷ್ಟೇ ಏಕೆ ಮೃತ್ಯುವಿಗೆ ಮಹಾಕಾಲ ಸ್ವರೂಪರಾಗಿ
ಮೆರೆದವರು-ನಮ್ಮ ಶಿವಶರಣರು ನೋಡ್ರೆಪಾ !
ಜಗದ ಅಳಿವು-ಉಳಿವುಗಳಿಗೆ ಹೊರಗಾಗಿ ಅರ್ಥಾತ್



ಪ್ರಳಯವನ್ನು ಮೀರಿ ನಿಂತವರು ಶರಣರು.
ಜಗದಾದಿ ಯುಗಯುಗಾಂತರಗಳಿಗೂ ಮೊದಲಿಗರು !
ಅಂತೆಯೇ 'ಅನಾದಿ ಶರಣ' ನೆಂಬುದು ದಿವ್ಯವಾಣಿ
ಆದಿ, " ಶ್ರೀ ಗುರುಬಸವಲಿಂಗಾಯ ನಮಃ" ಇದು ಮಂತ್ರವಾಕ್ಯ ನೋಡ್ರೆಪಾ!
ಇಲ್ಲಿ ನಾವು ನಿಮಗೆ ಒಂದು ಉದಾಹರಣೆ ಹೇಳಬಹುದು :
"ಒಬ್ಬ ಹೆಣ್ಣು ಮಗಳು ಗುಗ್ಗರಿ ಕಾಳುಗಳನ್ನು
ಒಂದು ಕೊಳಗದಲ್ಲಿ ಹಾಕಿ ಕುದಿಯಲು ಇಟ್ಟಿದ್ದಾಳೆ-
ಅದರಲ್ಲಿ ಎಲ್ಲಾ ಕಾಳುಗಳು ಕುದ್ದಂತೆ ಕಂಡರೂ,
ಒಂದೆರಡು ಕುದಿಯದೆ ಹಾಗೇ ಉಳಿದ
ಸಿಡಿಗಾಳು (ಕಳ್ಳಕಾಳು)ಗಳನ್ನು ಆಕೆ ಹೊರಕ್ಕೆ ಎಸೆಯುತ್ತಾಳೆ.
ಈ ಸಿಡಿಗಾಳುಗಳೆ ನಿರ್ಬೀಜ ಕಾಳುಗಳೆಂದು ಹೇಳಲ್ಪಡುವುವು.
ಈ ಸಿಡಿಗಾಳುಗಳು ಭೂಮಿಯಲ್ಲಿ ಮತ್ತೆ ಬೀಜೋತ್ಪತ್ತಿಗೆ
ಹೇಗೆ ಕಾರಣವಾಗಲಾರವೊ
ಹಾಗೆಯೆ ಶಿವಶರಣರು ಭವದ ಬಳ್ಳಿಗೆ ಬೀಜವಾಗಲಾರರು ನೋಡ್ರೆಪಾ !
ಅಂತೆಯೆ ಷಟ್‌ಸ್ಥಲ ಜ್ಞಾನಮೂರ್ತಿಯಾದ ಚನ್ನಬಸವಣ್ಣನವರು ಹೀಗೆ ಹೇಳಿದುದು:
"ಬಟ್ಟ ಬಯಲೆಲ್ಲ ಗಟ್ಟಿ ಗೊಂಡಡೆ,
ಸ್ವರ್ಗ-ಮರ್ತ್ಯ-ಪಾತಾಳಕ್ಕೆ ಠಾವೆಲ್ಲಿಹುದೊ ?
ಮೇಘದ ನಿರ್ಮಲ ಜಲವೆಲ್ಲ ಮುತ್ತುಗಳಾದಡೆ,
ಸಪ್ತ ಸಾಗರಂಗಳಿಗೆ ಉದಕಂಗಳೆಲ್ಲಿಹುದೊ ?
ಕಷ್ಟಜೀವಿ ಮನುಜರು ನೆಟ್ಟನೆ ಶಿವಜ್ಞಾನಿಗಳಾದಡೆ
ಮುಂದೆ ಭವದ ಬಳ್ಳಿಗೆ ಬೆಳೆಯೆಲ್ಲಿಹುದೊ ?
॥ಗ್ರಂಥ॥ ಗುರುಭಕ್ತಿ ಪರಿತ್ಯಾಗೀ ಸದ್ಯೋಹಿ ನರಕಂ ವ್ರಜೇತ್॥
ಇಂತೆಂದುದಾಗಿ : ಕೂಡಲ ಚನ್ನಸಂಗಯ್ಯಾ ಲಕ್ಷಕ್ಕೊಬ್ಬ ಭಕ್ತ,
ಕೋಟಿಗೊಬ್ಬ ಶರಣ "
ಶಿವಬೀಜವುಳ್ಳ, 'ಶಿವಬೀಜವಾದುವರಿಗೆ'
ಈ ಭವಚಕ್ರದ ಬಿಡುಗಡೆಯಲ್ಲದೆ,
ಭವಭಾರಿಗಳಿಗೆಂತು ಭವಪಾಶ ಬಿಟ್ಟೀತ್ರೆಪಾ" ?
ಇಂತು, ಪರಮ ಶಿವಸ್ವರೂಪಿಗಳಾದ, ಮಹಾತಪಸ್ವಿಗಳಾದ
ಶ್ರೀ ಮುರಗೋಡ ಅಜ್ಜನವರ ತೃತೀಯ ಸಂದೇಶಮಯ
ಅಮೃತವಾಣಿ ! ಕಾಣಾ ! ಶ್ರೀಶೈಲಮಲ್ಲಿಕಾರ್ಜುನ,"

[109]

ಬ್ರಹ್ಮಾಂಡ-ಪಿಂಡಾಂಡ: "ಒಂದೇ ಪರವಸ್ತು ಸರ್ವಶೂನ್ಯ(೦) ನಿಷ್ಕಲಲಿಂಗ
(1) ಎರಡಾಗಿ (D) ಅರ್ಧಭಾಗ ಅಲ್ಲೇ ಉಳಿಯಿತು.
(D) ಉಳಿದರ್ಧ ಭಾಗವು-ಸಕಲ ಸಚರಾಚರ ಮೊದಲಾಗಿ ಸೃಷ್ಟಿಯ
ನ್ನೊಳಗೊಂಡ ಬ್ರಹ್ಮಾಂಡವಾಯಿತು.
ಹೇಗೆ ಬ್ರಹ್ಮಾಡವೊ ಹಾಗೆಯೆ ಪಿಂಡಾಂಡವು
ಈಬ್ರಹ್ಮಾಂಡ (ಬ್ರಹ್ಮಹೃದಯ ಅಥವಾಗರ್ಭ)ದಲ್ಲಿ
ಪಿಂಡಾಂಡ ಹುದುಗಿರುವಂತೆ,
ಈ ಪಿಂಡಾಂಡದಲ್ಲಿ ಬ್ರಹ್ಮಾಂಡ (ಪಿಂಡಬ್ರಹ್ಮ)
ಅಡಕವಾಗಿರುವುದು ನೋಡ್ರೆಪಾ!
ಈ ಚತುರ್ದಶ ಭುವನಂಗಳನ್ನೊಳಗೊಂಡ
ಬ್ರಹ್ಮಾಂಡ (ಮಹಾಲಿಂಗ) ವೆಲ್ಲವೊ, ಆ ಅಖಂಡ ಪರವಸ್ತು-
(ಪರಶಿವ ಅಥವಾ ನಿರಾಕಾರ ಶಿವತತ್ತ್ವ)ವಿನ ಹೃದಯದಲ್ಲಿರುವುದು.
ಅಂತಹ ನಿರಾಕಾರ ನಿರಾಲಂಬ ಪರಶಿವತತ್ತ್ವ ಮೂರ್ತಿಯೆ
ಬಸವಣ್ಣ 'ಅನಾದಿಶರಣ' ನೋಡ್ರೆಪಾ!"
ಇಂತು ಭುವನ ಭಾಗ್ಯ ವಿಶೇಷದಿಂದವತರಿಸಿರ್ಪ
ವಿಶ್ವದ ಮಹಾವಿಭೂತಿಗಳೆನಿಸಿರ್ದ ಮುರಗೋಡ-
ಶ್ರೀಮಹಾಂತ ಶಿವಯೋಗಿಗಳ ಚತುರ್ಥ ವಚನಾಮೃತ!
ಸವಿಯಬಾರಾ, ಶ್ರೀಶೈಲ ಮಲ್ಲಿಕಾರ್ಜುನ!"

[110]

"ಕನ್ನಡ ಕವಿಕಾಳಿದಾಸ"ನು ಕೆಲವು ಮಹತ್ವದ ತಾತ್ತ್ವಿಕ ಹಾಗೂ ಧಾರ್ಮಿಕ ಪ್ರಶ್ನೆಗಳನ್ನು ಪರಮ ಪೂಜ್ಯ ಮುರಗೋಡ ಶ್ರೀಗಳವರಲ್ಲಿ ಪಾಟಿಯ (ಹಲಗೆಯ) ಮೇಲೆ ಬರೆದು ಕೇಳುವನು. ಶ್ರೀ ಪೂಜ್ಯರು ಉತ್ತರ ರೂಪವಾಗಿ ತಮ್ಮ ಬಾಯಿಂದಲೇ ಅಮೃತವಾಣಿಯನ್ನು ಸುರಿಸುವರು. ಕವಿಯು ಹಲಗೆಯ ಮೇಲೆ ಬರೆದು ತೋರಿಸಿ ಪ್ರಶ್ನೆಗಳನ್ನು ಕೇಳುವ ಸಮಯದಲ್ಲಿ ಶ್ರೀಮಠದ ಮೇನೆಜರ್ ಶ್ರೀ ಕುಬಸದ ಮಾಸ್ತರರೂ ಬಳಿಯಲ್ಲಿಯೇ ನಿಂತಿದ್ದರು.]

**ಸಂಭಾಷಣೆ (ಪ್ರಶ್ನೋತ್ತರರೂಪದಲ್ಲಿ:)**

ಪ್ರಶ್ನೆ 1. ಕನ್ನಡ ಕವಿಕಾಳಿದಾಸ: "ಮಾನವನ ಪುನರ್ಜನ್ಮದ ಬಗೆಗೆ ಸನ್ನಿಧಿಯ ಸಂದೇಶವೇನು?

ಉತ್ತರ 1, ಶ್ರೀಮಹಾಂತ ಶಿವಯೋಗಿಗಳು: ವಾಸನಾ ಕ್ಷಯಃವೇ ಮೋಕ್ಷವು. ವಾಸನಾಯುಕ್ತವಾದ ದೇಹಿಯ ಆತ್ಮವು ಮರಳಿ ಭೂಮಿಗೆ ಹುಟ್ಟಿ ಬರುವುದೇ ಪುನರ್ಜನ್ಮವು. ಇದೇ ಬಂಧ-ಮೋಕ್ಷಗಳ ಬಗೆ.



ಗಾಳಿಯು ಕಸುಮ ಗಂಧವನ್ನು ಎಳೆದುಕೊಂಡು ಹೋಗುವಂತೆ, ಈ ದೇಹವನ್ನು ತೊರೆದು ಹೋಗುವಾಗ ಆತ್ಮವು ದೇಹಗತ. ವಾಸನೆಯನ್ನು ಎಳೆದುಕೊಂಡು ಆಕಾಶ ಮಾರ್ಗವಾಗಿ ಹೋಗುವುದು. ಈ ವಾಸನಾಮಯ (ಜಡದ್ರೂಪ.ಅಶಾಂತಿಯುಕ್ತ) ಆತ್ಮವು ವಾಯುವಿನೊಡನೆ ಸೇರಿ ಆಕಾಶ ಮಂಡಲದಲ್ಲಿ ಸಂಚರಿಸುತ್ತ, ಮೇಘದೊಡನೆ ಕೂಡಿ, ಮಳೆಯ ರೂಪದಲ್ಲಿ ಭೂಮಿಗೆ ಬಿದ್ದು, ಧಾನ್ಯದಲ್ಲಿ ಬೆರೆದು, ಮನುಷ್ಯನ ಆಹಾರವಾಗಿ ಪರಿಣಮಿಸಿ ಶರೀರವನ್ನು ಪ್ರವೇಶಿಸುತ್ತಿದೆ. ಅದೇ ಮುಂದೆ ಶುಕ್ಲ-ಶೋಣಿತರೂಪವಾಗಿ ಗರ್ಭವನ್ನು ತಾಳಿ ಭೂಮಿಗೆ ಬರುತ್ತಿದೆ. ಈ ವಾಸನೆಯೇ ಪುನರ್ಜನ್ಮಕ್ಕೆ ಕಾರಣವಾಗಿ ಪರಿಣಮಿಸುವುದು ನೋಡ್ರೆಪಾ!

ಪ್ರಶ್ನೆ 2. ಕನ್ನಡ ಕವಿಕಾಳಿದಾಸ: ಭಾರತದ ಬಡತನ ನಿವಾರಣೆಯಾಗಿ ನಮಗೆ ಶಾಂತಿ ದೊರೆಯುವುದು ಯಾವಾಗ? ಬುದ್ಧಿ!

ಉತ್ತರ 2. ಮಹಾಂತ ಶಿವಯೋಗಿಗಳು: ಪ್ರವೃತ್ತಿ ಮತ್ತು ಎಂಬ ನಿವೃತ್ತಿ ಎಂಬ ಎರಡು ಮಾರ್ಗಗಳಿವೆ. ಈ ಜಗತ್ತಿನಲ್ಲಿ, ಪ್ರವೃತ್ತಿ ಮಾರ್ಗದಲ್ಲಿರುವಾಗ ನಮಗೆ ಅಲೆದಾಟ ಅಶಾಂತಿ- ಅದೇ ನಾವು ನಿವೃತ್ತಿ ಮಾರ್ಗವನ್ನನುಸರಿಸುವಾಗ ಸುಖ-ಸಮಾಧಾನಗಳಿಂದ ತುಂಬಿದ ಶಾಂತಿ. ಇಲ್ಲಿಯೇ ಕೈಲಾಸವಾಸ. ಇದೇ ಪ್ರವೃತಿ ಹಾಗೂ ನಿವೃತ್ತಿ ಮಾರ್ಗ ರೀತಿ. ಆತ್ಮಧೀಶಕ್ತಿ ತುಂಬಿದ ಇಂದಿನ ಗಾಂಧೀಜಿ ಯಾರ್ರೆಪಾ? ಅವರು ದೇವರು!

ಶ್ರೀ ಬಸವಾದಿ ಪ್ರಮಥರು ಪ್ರವೃತ್ತಿ ಮಾರ್ಗದಲ್ಲಿದ್ದರೂ ನಿವೃತ್ತಿ ಪಥವನ್ನು ಸರಿಸಿ ಅವರು ನುಡಿದಂತೆ ನಡೆದು ತೋರಿಸಿದರು-ಅಂತೆಯೇ ಅವರು ಲೋಕ ಕಲ್ಯಾಣಕ್ಕೆ ಕಾರಣರಾದರು ನೋಡ್ರೆಪಾ!

ಶುದ್ಧ ಕಾಯಕ ಮಾರ್ಗದಲ್ಲಿ ಆಚರಿಸುವ ಶರಣರಿಗೆ ಬಡತನವೆಂಬುದೇ ಇಲ್ಲ. ಶಿವಭಕ್ತರು ಬಡವರಲ್ಲ. ಶಿವಸಹಜ ಸದ್ಭಕ್ತಿ ಸಂಪದ್ಭರಿತ ಶರಣರಿಗಿಂತ ಹಿರಿಯರಾರಿಲ್ಲ ಆತ್ಮಸಂಪತ್ತಿನ ಮುಂದೆ ಲೌಕಿಕ ಸಿರಿತನವು ಸಾಟಿಯಲ್ಲ. ಲೋಕದಲ್ಲಿ ಭಕ್ತಿಗಿಂತ ಮಿಗಿಲಾದುದು ಇನ್ನೊಂದಿಲ್ಲ. ಜ್ಞಾನರತ್ನ ಸಂಪಾದನೆಗಿಂತ ಹಿರಿದಾದುದು ಬೇರೊಂದಿಲ್ಲ. ಶಿವಜ್ಞಾನಾನುಭಾವವೇ ಅತ್ಯಂತ ಶ್ರೇಷ್ಠ.

ಲಿಂಗ ಭೋಗೋಪ ಭೋಗಿಗಳಾದ ಶಿವಜ್ಞಾನಮೂರ್ತಿಗಳಾದ
ಮಹಾನುಭಾವರಾದ ಶರಣರು- ಸದಾ ಸಂತೃಪ್ತರು. ನಿತ್ಯಶಾಂತಿ ಭರಿತರು.
ಮಂಗಲ ಸ್ವರೂಪರು-ಎಲ್ಲವನ್ನೂ ಶಿವಪ್ರಸಾದವಾಗಿ ಸೇವಿಸುವರು
ನಮ್ಮ ಶಿವಶರಣರು, ಶಿವನಿಗಿಂತ ಶಿವಶರಣರೇ ಅಧಿಕರು ನೋಡ್ರೆಪಾ!

**ಕನ್ನಡಕವಿ ಕಾಳಿದಾಸ:** (ಶ್ರೀಗಳವರ ಪಾದಕಮಲಗಳಿಗೆ ನಮಸ್ಕರಿಸಿ) ಬುದ್ಧಿ !
ತಮ್ಮ ಪಾದ ಆಶೀರ್ವಾದ ಸದಾಕಾಲ ನಮ್ಮೆಲ್ಲರ ಮೇಲಿರಲಿ !
**ಮಹಾಂತಶಿವಯೋಗಿಗಳು :** ಆಗಲಿ! ಆಗಲಿ!!..... .......!!!"
ಇಂತು ಮುರಗೋಡಮಹಾತಪಸ್ವಿ ಶ್ರೀ ಪರಮ ಪೂಜ್ಯಪಾದರ ಪಂಚಮ ವೇದವಾಣಿ!
ಕೇಳಾ, ಶ್ರೀ ಶೈಲ ಮಲ್ಲಿಕಾರ್ಜುನ!"

---

## ಅರಭಾವಿ ಶ್ರೀಮಹಾಂತ ದುರದುಂಡೀಶ್ವರ ಶಿವಯೋಗಿ
## (ಸ್ತುತಿಗೀತೆ)

**ಪರಶಿವನ ಅವತಾರ**
ಅರಭಾವಿ ಮಹಾಂತ ದುರದುಂಡಿ ಶಿವಯೋಗಿ
ಪರಶಿವನ ಅವತಾರ ನೀಬಂದು ನೆಲಸಲ್ಕೆ
ಲೀಲೆಯಿಂ ಮೆರೆವೆ! ಧರ್ಮಜ್ಞ 1.

**ಲೀಲಾಮೂರ್ತಿ**
ಸಾಲೋಳಿ ಭೂಮಿಯಲಿ ಲೋಲನೀ ಜನಿಸಿರಲು
ಮಾಲೆಯೆನೆ ಅರಭಾವಿ ತೊರೆದು ಮುರಗೋಡಕೆ ಬಂದೆ
ಲೀಲೆಯಿಂ ಮೆರೆವೆ! ಧರ್ಮಜ್ಞ 2.

**ಮುಕ್ತಿಯ ಮಂದಿರ**
ಕಾಲಂಗೆ ಕಾಲಮೃತ್ಯು ಶೀಲಪವಿತ್ರ ಪುಣ್ಯಗಾತ್ರ
ಭಾಳನೇತ್ರನ ಪುತ್ರ ಯೋಗಿನೇತ್ರ ಧರ್ಮಸೂತ್ರ
ಮೇಲು ಮುಕ್ತಿ ಸತ್ರ! ಧರ್ಮಜ್ಞ 3

**ಲಿಂಗತತ್ತ್ವಾನುಭಾವಿ**
ಬಸವಾದಿ ಶರಣರಾ ಶಿಶುಮಹಾಂತ ಶಿವಯೋಗಿ
ಪೊಸೆದಾಚರಿಸೆ ನೀಲಿಂಗ ತತ್ತ್ವವನು ಅನುಭವಿಸಿ
ವಸುಧೆಯೊಳ್ ಶಾಂತಿ! ಧರ್ಮಜ್ಞ 4.

**ಶಿವಯೋಗ ನಿದ್ರಾಮುದ್ರೆ**
ಶಿವಯೋಗ ನಿದ್ರೆಯೊಳು ಮೈಮರೆದು ನೀನಗುವೆ
ಶಿವನೊಡನೆ ಮಾತಾಡಿ-ಸೃಷ್ಟಿಹಿತ ಮಾಳ್ಪೆ! ಅನು-
ಭವಾಮೃತ ಸುರಿವೆ! ಧರ್ಮಜ್ಞ 5.

**ಮಂಗಲವನು ನೀಡು**
ಮೃಡನ ಪೂಜೆಯೆ ಸತ್ಯಧ್ಯೇಯ ಯೋಗಿವರ್ಯ
ಕೊಡುವೆ ಸನ್ಮಂಗಲವನುರೆ ಜಗದ ಜನತೆಗೆ ನಿತ್ಯ
ತಡೆದು ಭವಚಕ್ರ! ಧರ್ಮಜ್ಞ 6.



**ಕಾಮಧೇನು ಕಲ್ಪವೃಕ್ಷ**
ಕಾಮಧೇನು ಕಲ್ಪವೃಕ್ಷ ಪರುಷ ಚಿಂತಾಮಣಿ
ಸ್ವಾಮಿ ಸರ್ವವೂ ನಿನ್ನೊಳು ನೆಲಸಿರೆ ತಾನೆ
ಭೂಮಿ ಪಾವನವಲ್ತೆ ? ಧರ್ಮಜ್ಞ 7.

**ಜ್ಞಾನರತ್ನ**
ವಿರತರಿಗೆ ವಿರಕ್ತನೆನೆಗುರುಗಳಿಗೆ ಗುರುನೀನು
ಪರತರ ಜಗದ್ಗುರುವಿಗೂ ಜಗದ್ಗುರು ನೀನು
ಪರಮ ಜ್ಞಾನರತ್ನ! ಧರ್ಮಜ್ಞ 8.

**ಚಂದ್ರಮುಖ ಬಿಂಬ**
ಹೊಳೆವ ಮುಖ ಶಶಿಕಾಂತಿ ತೆಳುವಾದ ತನುಶಾಂತಿ
ಕಳೆನುಂಬಿ ಶಿವರೂಪಿ ತವಕಾಯ ಹಣ್ಣಾಯ್ತು
ಒಳಿತಲ್ತೆ ? ಜಗಕೆ! ಧರ್ಮಜ್ಞ 9.

**ಲಿಂಗ ಪಸ್ತೇಜ**
ಲಿಂಗತಪ ತೇಜವದು ನಿನ್ನಲ್ಲಿ ಬೆಳಗುವುದು
ಸಂಗ ಸುಖ ಕೈಲಾಸ ಸ್ವಾಮಿ ತವಸುವಿಲಾಸ
ಮಂಗಳವಕ್ಕು ಧರೆಗೆ ! ಧರ್ಮಜ್ಞ 10.

**ಜಗಕೆ ಮೇಟಿಯಾಧಾರ**
ಕೋಟಿ ತಪಗೆಯ್ದಿಹರು ಸಾಟೆನಿನಗಾರಿಹರು !
ಕೋಟಲೆಗೆ ಒಳಗಾದವರೆ ಹೆಚ್ಚು ಭೂಮಿಯೊಳು
ಮೇಟಿಯಲ್ತೆ ? ನೀನು ! ಧರ್ಮಜ್ಞ 11.

**ಮಹಿಮೆ ವರ್ಣನೆಗೆ ಅಸಾಧ್ಯ**
ಶಿವಯೋಗಿ ಲಲಾಮನೆ ತವ ಮಹಿಮೆಯಾ ವರ್ಣನೆ
ಭುವನವಮಂ ಪೊತ್ತಿರ್ದ ಶೇಷಂಗಸದಳಮೆನೆ
ಕವಿಯೇಂ ಬಣ್ಣಿಪನು ! ಧರ್ಮಜ್ಞ 12

**"ದೇವರಮಹಿಮೆ ದೇವರೇ ಬಲ್ಲ"**
"ದೇವರ ಮಹಿಮೆ ದೇವರೇಬಲ್ಲ" ನೆನವವ್ರೋಲ್
ಪಾವನಚರಿತ ನಿನ್ನ ಮಹಿಮೆಯನು ನೀ ಬಲ್ಲೆ
ಭಾವಚಿಂತಾಮಣಿ ! ಧರ್ಮಜ್ಞ 13.

**ಕವಿಯ ಮಂಗಲ**
ಜಯತುಜಯ ಮಂಗಲವು ಶಿವಯೋಗಿ ಪುಂಗವಗೆ
ಜಯವೆನುತೆ "ಕನ್ನಡಕವಿಕವಿಕಾಳಿದಾಸ" ಧರೆಗೆ
ಜಯಗೀತ ಪೇಳ್ವ ! ಧರ್ಮಜ್ಞ 14.

# ಶರಣರು ಕಂಡ "ಶಿವ ಸ್ವರೂಪ"

ಶ್ರೀ ಎನ್.ಆರ್. ಪಾಟೀಲ್ ಆರ್.ಎಂ.ಎಸ್. (ವಿಂಗಡನೆ ವಿಭಾಗ) ಹೊಸಪೇಟೆ-583201

'ಶರಣ ಎಂದಾಗ ಶಿವನ ನೆನಪಾಗುವುದು ಅತ್ಯಂತ ಸಹಜ. ಶರಣ ಶಬ್ದದ ಹಿಂದೆ ಶಿವ ಶಬ್ದ ಸೇರದೇ ಬಳಕೆಯಾದರೂ ಅದು ಅರ್ಥವ್ಯಾಪ್ತಿಯಲ್ಲಿ 'ಶಿವಭಕ್ತ ಎಂದೇ ಅರ್ಥೈಸಲ್ಪಡುತ್ತದೆ. ಶರಣರಿಗೂ ಶಿವನಿಗೂ ಬಿಡದ ಬಂಧ. ಅವರು ಶಿವನೊಂದಿಗಿನ ತಮ್ಮ ಸಂಬಂಧವನ್ನು ಸತಿ-ಪತಿಗೆ ಹೋಲಿಸಿಕೊಂಡರು. ಲಿಂಗಪತಿಯೇ ಪರದೈವವೆಂದು ನಂಬಿ ತಮ್ಮ ತನು ಮನ ಧನವನ್ನರ್ಪಿಸಿ ಧನ್ಯರಾದರು. ಶರಣರಿಗೆ ಆದಿ ಅಂತ್ಯ ಎಲ್ಲವೂ ಶಿವನೇ ಹೌದು. ಈ ಜಗತ್ತಿಗೆ ಶಿವನೇ ಮೂಲವಾಗಿದ್ದು, ಶಿವನ ಲೀಲೆಯಿಂದ ಅವನ ಶಕ್ತಿಯು ಆವಿರ್ಭಾವಗೊಂಡು ಮಲತ್ರಯಗಳೆಂಬ ಉಪಾಧಿಗಳೊಳಗಾಗಿ ಜೀವ ಮತ್ತು ಜಗತ್ತಿನ ಉತ್ಪತ್ತಿಗೆ ಕಾರಣವಾಯಿತೆಂಬುದು ಅವರ ದೃಢನಂಬಿಕೆ. ಶರಣರ ದೃಷ್ಟಿಯಲ್ಲಿ ಸಚ್ಚಿದಾನಂದ ಸ್ವರೂಪಿಯಾದ ಪರಶಿವನು ಜಗವಾಗಬಲ್ಲ; ಜಗವಾಗದಿರಲೂಬಲ್ಲ. ಲೀಲೆಯಾದೊಡೆ ಉಮಾಪತಿ ತಪ್ಪಿದೊಡೆ ಸ್ವಯಂಬು ಇಂತಹ ಜಗತ್‌ಕರ್ತನ ಸ್ವರೂಪವನ್ನು ಶರಣರು ಕಂಡ ಬಗೆ ಅತ್ಯಂತ ಮನನೀಯ.

ಶಿವನಶಕ್ತಿಯನ್ನು ವ್ಯಕ್ತಿಯನ್ನಾಗಿಸಿ ಶಿವನು ಪತಿಯನ್ನಾಗಿ ಮಾಡಿ ಅರ್ಧನಾರೀಶ್ವರರೂಪ ತೊಡಿಸಿದ ಆಸ್ತಿಕಮತಿಗಳಿಗಿಂತಲೂ ಬಹು ಎತ್ತರಕ್ಕೇರಿದ ಅಲ್ಲಮಪ್ರಭುಗಳು ಪರಶಿವನ ಮೂಲಸ್ವರೂಪವನ್ನು ಹೀಗೆ ವಿವರಿಸಿದ್ದಾರೆ-

"ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರ ಎಂಬ ಸಂದಣಿ
ತಲೆದೋರದ ಮುನ್ನ, ಬಯಲೇ ಸ್ವರೂಪವಾಯಿತ್ತು
ಆ ಸ್ವರೂಪಿನ ನಡೆಯನು ಉಪಮಿಸಬಾರದು;
ನೋಡಾಬಾರದ ಬೆಳಕು, ಕೂಡಬಾರದ ಮೂರ್ತಿ
ಅಖಂಡ ಅಪ್ರತಿಮ ಗುಹೇಶ್ವರಲಿಂಗದ ಬೆಳಗಿನ ಮೂಲದ
ಲಿಂಗಸಂಗಿಗಳಲ್ಲದೆ ಮಿಕ್ಕ ಅಂಗವಿಕಾರಿಗಳೆತ್ತ ಬಲ್ಲರು ?"

ಅಲ್ಲಮಪ್ರಭುಗಳ ಈ ವಿಚಾರಣೆಯಲ್ಲಿ ಅಂತರಂಗದ ಅನುಭಾವ ಗ್ರಾಹ್ಯವಾದ ಶಿವನ ಸ್ವರೂಪವಿದೆ. ಈ ಸ್ವರೂಪದ ಸಾಕ್ಷಾತ್ಕಾರ ಲಿಂಗಸಂಗಿಗಳಿಗೆಮಾತ್ರ ಎನ್ನುತ್ತಾರೆ ಅಲ್ಲಮರು. ಪರಶಿವನು ವಿಶ್ವದ ಉದಯಕ್ಕೆ ಮುನ್ನವೂ ಇದ್ದು, ವಿಶ್ವದೊಂದಿಗೆ ಮೈಗೂಡಿ ಬಂದನೆಂಬುದನ್ನು ಅಲ್ಲಮರು ಹೀಗೆ ಹೇಳುತ್ತಾರೆ.



"ಆದಿಯೊಧಾರವಿಲ್ಲದಂದು,
ಹಮ್ಮುಬಿಮ್ಮುಗಳಿಲ್ಲದಂದು
ಸುರಾಳ ನಿರಾಳವಿಲ್ಲದಂದು;
ಸಚರಾಚರವೆಲ್ಲ ರಚನೆಗೆ ಬಾರದಂದು;
ಗುರುಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ"

ಕಾಲದೇಶಗಳೆಂಬ ಜಾಲದಿಂದಾಗಿರುವ ಈ ಜಗತ್ತು ಮೈದೋರುವ ಮುನ್ನ ತನ್ನ ತಾನರಿಯದಂತೆ ಪರಶಿವನು ನಿಶ್ಚಲಸ್ಥಿತಿಯಲ್ಲಿದ್ದ ಎನ್ನುತ್ತಾರೆ ಅಲ್ಲಮರು.

ಆದಿಸ್ವಯಂಭುವಿಲ್ಲದ ಮುನ್ನ ಸಂಗನಿಸ್ಸಂಗವಿಲ್ಲದ ಮುನ್ನ;
ನಕ್ಷತ್ರಗ್ರಹಗಳಿಲ್ಲದ ಮುನ್ನ, ಯೋಗ ಶರಣಗಳಿಲ್ಲದ ಮುನ್ನ;
ಖೇಚರ ಭೂಚರರಿಲ್ಲದ ಮುನ್ನ ಆರೂ ಆರೂ ಇಲ್ಲದ ಮುನ್ನ;
ಆಕಾಶ ಮಾರುತವಿಲ್ಲದ ಮುನ್ನ, ಅಂಭುಧಿಶಮರವಿಲ್ಲದ ಮುನ್ನ
ಹರಿಬಹ್ಮಾದಿಗಳಾರ ನಿಲವಿಲ್ಲದಮುನ್ನ ಹಿಮಕರ ದಿನಕರ ಸುಳುವಿಲ್ಲದ ಮುನ್ನ;
ಹಿಂದಿಲ್ಲ ಮುಂದಿಲ್ಲ ಒಂದೂ ಇಲ್ಲದ ಮುನ್ನ;
ಗುಹೇಶ್ವರ ತಾಸಿದ್ದ ತನ್ನ ತಾನರಿಯದಂತೆ"

ಹೀಗೆ ಬಯಲೊಳಗೆ ಬಯಲಾಗಿದ್ದ ಶಿವನ ಸ್ವರೂಪವನ್ನು ಬಯಲು ಮಾಡುತ್ತ ಅಲ್ಲಮರು ಹೇಳುತ್ತಾರೆ.

"ನೆಲದ ಮರೆಯ ನಿಧಾನದಂತೆ
ಮುಗಿಲ ಮರೆಯಲಡಗಿದ ಮಿಂಚಿನಂತೆ.
ಬಯಲ ಮರೆಯಲಡಗಿದ ಮರೀಚಿಯಂತೆ.
ಕಂಗಳ ಮರೆಯಲಡಗಿದ ಬೆಳಗಿನಂತೆ.
ಗುಹೇಶ್ವರ ನಿಮ್ಮ ನಿಲವು."

ಈ ತೆರವಾಗಿ ಇದ್ದೂ ಕಾಣದಂತಿರುವ ಶಿವನ ನಿರೂಪ ಸ್ಥಿತಿಯೇ ಕ್ರಮವಾಗಿ ರೂಪಗೊಂಡು ಸೃಷ್ಟಿಗೆ ಮೂಲವಾಯಿತು. ಪರಶಿವನು ಮುಂದೆ ನಿಶ್ಚಲಸ್ಥಿತಿಯನ್ನು ತೊರೆದು ಹೊರಬಂದ ಬಗೆಯನ್ನು ಹೇಳುತ್ತ ಹಾವಿನ ಹಾಳಕಲ್ಲಯ್ಯ ಬಣ್ಣಿಸುತ್ತಾರೆ.

'ಬಯಲು ಮೊಳಗಿ ಮಳೆಸೃಜಿಸಿ, ಆ ಬಯಲು ಮಳೆಯನೊಡಗೂಡಿ ದಪ್ಪವಾಗಿಪ್ಪ ವಾರಿಕಲ್ಲಾಗಿ ತೋರಿದಂತೆ ನಿಮ್ಮ ನೆನಹೇ ನಿಮಗೆ ಶಕ್ತಿಯಾಯಿತ್ತಲ್ಲ, ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ ನಾಮ ಸೂಚನೆಯಾಯಿತ್ತಲ್ಲ; ಮಹಾಲಿಂಗೇಶ್ವರ ನಿಮ್ಮ ಆದಿಗೆ ಇದೇ ಪ್ರಥಮವಾಯಿತಲ್ಲ".

ಈ ಸೃಷ್ಟಿಯಲ್ಲಿ ಪರಶಿವನು ರೂಪಗೊಂಡಿರುವ ಬಗೆಯನ್ನು ಬಸವಣ್ಣನವರು ಈ ತೆರನಾಗಿ ಹೇಳುತ್ತಾರೆ.

"ಎತ್ತನೋಡಿದಡತ್ತ ನೀನೇದೇವಾ!
ಸಕಲ ವಿಸ್ತಾರದ ರೂಹು ನೀನೇದೇವಾ!
ವಿಶ್ವತಸ ಚಕ್ಷು ನೀನೇದೇವಾ!
ವಿಶ್ವತೋಮುಖ ನೀನೇದೇವಾ!
ವಿಶ್ವತೋ ಬಾಹು ನೀನೇದೇವಾ!
ವಿಶ್ವತಃಪಾದ ನೀನೇದೇವಾ ಕೂಡಲಸಂಗಮದೇವಾ."

ಇದು ಬಸವಣ್ಣನವರು ಕಂಡ ಪರಶಿವನ ವಿಶ್ವರೂಪ ದರ್ಶನ, ಶಿವಶರಣರು ಶಿವನನ್ನು ಕಂಡದ್ದು ಲಿಂಗದ ರೂಪದಲ್ಲಿ. ಅವರು ಶಿವಸ್ವರೂಪವನ್ನು ಈ ಲಿಂಗದ ಮೂಲಕ ಕಂಡು ಕೊಂಡಿದ್ದಾರೆ ವಿಶ್ವೋತ್ಪತ್ತಿಗೆ ಮೂಲವಾದಿದ್ದ ಲಿಂಗವನ್ನು ಕುರಿತು ಬಸವಣ್ಣ ಭಕ್ತಿ ಭಾವದಿಂದ ನುಡಿಯುತ್ತಾರೆ.

"ವೇದ ವೇಧಿಸಲರಿಯದೇ ಅಭೇದ್ಯಲಿಂಗವೆಂದು ನಡು ನಡುಗಿತ್ತು
ಶಾಸ್ತ್ರ ಸಾಧಿಸಲರಿಯದೇ ಅಸಾಧ್ಯಲಿಂಗವೆಂದು ಸಾರುತ್ತೈದಾವೆ
ತರ್ಕ ತರ್ಕಿಸಲರಿಯದೇ ಅತರ್ಕ್ಯಲಿಂಗವೆಂದು ಗಮನಿಸಲರಿಯದೇ ಹೋದುವು
ನರರೂ ಸುರರೂ ಅಂತವ ಕಾಣರು.
ನಮ್ಮ ಕೂಡಲ ಸಂಗಮ ಪ್ರಮಾಣ ಶರಣಬಲ್ಲ"

ಇದೇ ಮಾತನ್ನು ಬಸವಣ್ಣನವರು ಇನ್ನೊಂದೆಡೆ ಹೀಗೆ ಹೇಳುತ್ತಾರೆ-"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ....................." ಇದರಲ್ಲಿ ಲಿಂಗದ ವಿರಾಟ ಸ್ವರೂಪದ ದರ್ಶನವಿದೆ.

ಬಸವ ಪೂರ್ವ ವಚನ ಕಾರರಲ್ಲಿ ಜೇಡರ ದಾಸಿಮಯ್ಯನೂ ಅದ್ವಿತಿಯ. ಅವನು ನಿರಾಕಾರವಾಗಿ ಘಟದೊಳಗೆ ತೋರುವ ಸೂರ್ಯನಂತೆ. ಸರ್ವಜೀವಿಗಳಲ್ಲಿಯೂ ಅಡಗಿದ್ದ ಶಿವನ ಸ್ವರೂಪವನ್ನುಕಂಡು ಬೆರಗಾಗುತ್ತಾನೆ. ಅದನ್ನು ಅರಿಯದ ಜಗದ ಜಡಮತಿಗಳನ್ನು ನೋಡಿ ಕನಿಕರ ಪಟ್ಟಿದ್ದಾನೆ. ಅವನ ದಾನವಾದ ಈ ದೃಷ್ಟಿಯ ಸಕಲಸಂಪತ್ತನ್ನು ಉಂಡು, ಅನ್ಯರನ್ನು ಹೊಗಳುವ ಅನ್ಯ ದೈವಕ್ಕೆ ಎರಗುವ ಮೂಢರನ್ನು ಕಂಡು ರೇಗಿದ್ದಾನೆ. ಶಿವಸ್ವರೂಪವನ್ನು ವರ್ಣಿಸುತ್ತ ದಾಸಿಮಯ್ಯ ಮನದುಂಬಿ ಹೇಳುತ್ತಾರೆ.



"ಅಡಗಿನೊಳಗಣ ಹಾಲು ಅಡಗಿಪ್ಪ ಭೇದವನು
ಬೆಡಗಪ್ಪ ತುಪ್ಪದ ಕಂಪಿನ ಪರಿಯಂತೆ.
ಎಲೆ ಮೃಡನೆ! ನೀನು ಪ್ರಾಣಪ್ರಕೃತಿಗಳೊಳಗೆ
ಅಡಗಿಹ ಭೇದವ ಲೋಕದ
ಜಡಕಿತ್ತ ಬಲ್ಲರೈ ರಾಮನಾಥ!"

ಜೀವ ಹಾಗೂ ಜಗತ್ತಿನ ಉತ್ಪತ್ತಿಯ ಮೂಲ ಶಿವನೇ ಎಂದು ಎಲ್ಲ ಶರಣರೂ ನಂಬಿದ್ದರು. ಒಂದಡೆ ಬಸವಣ್ಣ ಶಿವಸ್ವರೂಪ ಬಣ್ಣಿಸುತ್ತ "ಕಾಲಿಲ್ಲದೆ ನಡೆವನ್ನು ಕೈಯಿಲ್ಲದೆ ಹಿಡಿವನು, ಕಣ್ಣಿಲ್ಲದೆ ನೋಡುವನು ....ಎನ್ನುತ್ತಾರೆ. ಪರಶಿವನು ಎಲ್ಲ ವಸ್ತುಗಳಲ್ಲಿ ಇರುತ್ತಾನೆ ಎಂದು ನಂಬಿದ್ದ ಶರಣರು ಶಿವ ಸ್ವರೂಪವನ್ನು ಬಣ್ಣಿಸಲು ಸಾರ್ಥಕ ಉಪಮೆಗಳನ್ನು ಬಳಸಿದ್ದರು "ಹೂವಿನೊಳಗಣ ಕಂಪಹೊರ ಸೂಸಿ ಸುಳಿವ ಅನಿಲನಂತೆ'' ಎಂದು ಜೇಡರದಾಸಿಮಯ್ಯ ಎಂದರೆ 'ನೆಲದ ಮರೆಯ ನಿಧಾನದಂತೆ, ತಿಲದ ಮರೆಯ ತೈಲದಂತೆ' ಎಂದು ಅಕ್ಕಮಹಾದೇವಿ ಹೇಳುತ್ತಾರೆ. ಎಲ್ಲವೂ ಶಿವಮಯ ಎಂದು ನಂಬಿದ್ದ ಸಿದ್ದರಾಮ ಹೇಳುತ್ತಾರೆ "ಇಚ್ಛಾಜ್ಞಾನ ಕ್ರಿಯಾಶಕ್ತಿ ನಿನ್ನಾಧೀನ ಕಂಡಯ್ಯಾ". ಇನ್ನೊಂದೆಡೆ 'ಕಾಯ ಮುನ್ನವೋ, ಕಾಯದಲ್ಲಿಪ್ಪ ಮನ ಮುನ್ನವೋ'... ... ನಿನ್ನ ನಿರಾಳ ನಿಜದ ನಿರ್ವಯಲಿನ ಶೂನ್ಯಾಶೂನ್ಯವೇ ಮುನ್ನ ನೋಡಾ ! ಇದನ್ನೇ ತೋಂಟದ ಸಿದ್ಧಲಿಂಗೇಶ್ವರರು ಹೀಗೆ ಹೇಳುತ್ತಾರೆ ನಿಃಕಲಶಿವತತ್ವದಲ್ಲಿ ಜ್ಞಾನಚಿತ್ತು ಉದಯವಾಯಿತ್ತು ....... ಆ ಓಂಕಾರವೆಂಬ ಪ್ರಣಮವೇ ಅಖಂಡ ಪರಿಪೂರ್ಣ ಗೋಳತಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ".

ಈ ತೆರನಾಗಿ ಶರಣರು ಶಿವನನ್ನು ಈ ಜಗತ್ತಿನ ಮೂಲಪುರುಷನನ್ನಾಗಿ, ವಿಶ್ವರೂಪದವನನ್ನಾಗಿ ಚಿತ್ರಿಸಿದ್ದಾರೆ. ಬ್ರಹ್ಮಾಂಡ, ಪಿಂಡಾಂಡಗಳ ಸೃಷ್ಠಿಗೆ ಪೂರ್ವ ಭಾವಿಯಾಗಿ ಜ್ಯೋತಿರ್ಮಯ ಮಹಾಲಿಂಗವು ಉದ್ಭವವಾಯಿತು. ಪರಶಿವನ ಚಿತ್‌ಶಕ್ತಿ ಸ್ಪಂದನವೇ ಜ್ಯೋತಿಯಾಯಿತು. ಈ ಜ್ಯೋತಿಯಿಂದಲೇ ಜಗತ್ತು, ಜೀವಿಗಳು ಜನ್ಮ ತಾಳಿದವು. ಹಣೆಗಣ್ಣಿನಲ್ಲಿ ಲಕ್ಷ್ಯವನ್ನು ಕೇಂದ್ರೀಕರಿಸಿ ಓಂಕಾರದಧ್ವನಿಯನ್ನು ಹೇಳುವಾಗಜ್ಯೋತಿ ಕಾಣುತ್ತದೆ. ಶರಣ ಎಂದರೆ ಪರಶಿವನಲ್ಲಿ ಶರಣಾಗತನಾದವ. ಶಿವಾನುಭವಿ ಎಂದರೆ ಪರಶಿವನ ಅನುಸಂಧಾನದಲ್ಲಿ ಸತತವೂ ತೊಡಗಿದವ. ಶೂನ್ಯಎಂದರೆ ಸೃಷ್ಟಿಯ ಪೂರ್ವದಲ್ಲಿ ಪರಶಿವನಲ್ಲದೇ ಬೇರೇನೂ ಇರಲಿಲ್ಲ. ಇದು ಶರಣರು ಕಂಡುಕೊಂಡ ಶಿವಸ್ವರೂಪ.

# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್. ಎಸ್. ನರಸಿಂಹಜೀಯರ್, ಲಕ್ಷ್ಮಯ್ಯ ಗಾರ್ಡನ್, 14ನೇ ಕ್ರಾಸ್,
ಸೋಮೇಶ್ವರಪುರಂ, ತುಮಕೂರು-2

ವಿಶ್ವದ ಸ್ವಲ್ಪ ಭಾಗ ಮಾತ್ರವೇ ನಮಗೆ ಗೋಚರವಾಗುತ್ತಿದೆ. ಕಾಣಿಸದೇ ಇರುವ ಭಾಗವೇ ಹೆಚ್ಚು. ಈ ಎಲ್ಲಾ ಸೃಷ್ಟಿಗೂ ಮೂಲಭೂತವಾಗಿ ಎಲ್ಲದರಲ್ಲಿಯೂ ವ್ಯಾಪಿಸಿ ಮತ್ತು ಎಲ್ಲಕ್ಕೂ ಅತೀತವಾಗಿರುವ ಸ್ಥಿತಿಯು ಯೋಚನೆಗೆ ನಿಲುಕದ್ದು: ಊಹೆಗೆ ಅಸಾಧ್ಯ. ಸೂಕ್ಷ್ಮ ಮತ್ತು ಸ್ಥೂಲ ದೃಷ್ಟಿಗಳಿಗೆ ಗೋಚರಿಸುವಂತಹದಲ್ಲ. ಎಂತಹ ಪ್ರಜ್ಞೆಗೂ ಅರ್ಥವಾಗುವಂತಹುದಲ್ಲ. ಈ ಮೂಲ ಸ್ಥಿತಿಯನ್ನು ಆಧ್ಯಾತ್ಮದಲ್ಲಿ ನಿರ್ಗುಣ ಬ್ರಹ್ಮನೆಂದು ಕರೆಯುತ್ತಾರೆ.

ಸಾಮಾನ್ಯ ಜನರಿಗೆ ಅರ್ಥವಾಗಲು ಈ ಮೂಲ ಸ್ಥಿತಿಯನ್ನು ಬ್ರಹ್ಮ ವಿದ್ಯಾ ಸಮಾಜದವರು ಪ್ರಕಟಿಸಿರುವ ಪುಸ್ತಕದಲ್ಲಿ ಸ್ಥೂಲ ಜಗತ್ತಿನ ವಿದ್ಯುಚ್ಛಕ್ತಿಗೆ ಹೋಲಿಸಿ ಉಪಮಾನ ಕೊಟ್ಟಿದ್ದಾರೆ. ಈ ಹೋಲಿಕೆ ಅತ್ಯಂತ ಸಮಂಜಸವೆನಿಸುತ್ತದೆ. ವಿದ್ಯುಚ್ಛಕ್ತಿಯ ವ್ಯಕ್ತ ಸ್ಥಿತಿಯನ್ನು ನಾವು ಕಾಣುತ್ತೇವೆಯೇ ವಿನಾ ವ್ಯಕ್ತ ಪೂರ್ವ ಸ್ಥಿತಿಯನ್ನಲ್ಲ. ಆ ವ್ಯಕ್ತ ವಿದ್ಯುಚ್ಛಕ್ತಿ ಏನೆಂಬುದನ್ನು ಯಾವ ವಿಜ್ಞಾನಿಗಳೂ ಅರಿಯರು. ಆದರೆ ಅಂತಹ ಸ್ಥಿತಿ ಇಲ್ಲ ಎಂದು ಯಾರೂ ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ ಆ ಅವ್ಯಕ್ತ ಸ್ಥಿತಿಯಿಂದ ಅದು ಪರಸ್ಪರ ವಿರುದ್ಧವಾದ ಎರಡು ಶಕ್ತಿಗಳಾಗಿ ಹೊರಹೊಮ್ಮಿ (Positive Negative) ನಾನಾ ಯಂತ್ರಗಳನ್ನು ಹೊಕ್ಕು ವಿವಿಧ ಕೆಲಸಗಳನ್ನು ಮಾಡಲು ಸಹಾಯ ಮಾಡುತ್ತದೆ. ಶಾಖ, ಬೆಳಕು ಕೊಡುತ್ತದೆ. ಇವುಗಳನ್ನೆಲ್ಲಾ ನಾವು ಪ್ರತಿಕ್ಷಣ ಅನುಭವಿಸುತ್ತೇವೆ. ಇದೇ ರೀತಿಯಲ್ಲಿ ಆದಿ ನಿರ್ಗುಣ ಸ್ಥಿತಿಯಲ್ಲಿರುವ ದೈವ ಚೈತನ್ಯವೂ ಸಹ ಪರಸ್ಪರ ವಿರುದ್ಧದ ಎರಡು ಶಕ್ತಿಗಳಾಗಿ ಹೊರಹೊಮ್ಮುತ್ತದೆ. ಈ ಶಕ್ತಿಗಳೇ, ಒಂದು ಮೂಲ ಪುರುಷ, ಮತ್ತೊಂದು ಮೂಲ ಪ್ರಕೃತಿ, ಈ ಮೂಲ ಪ್ರಕೃತಿ ಕೋಟ್ಯಾಂತರ ಬ್ರಹ್ಮಾಂಡಗಳಿಗೆ ಮೂಲ, ಹಾಗೆಯೇ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆಲ್ಲಾ ಮೂಲ ನಾಯಕ ಅಥವಾ ಒಡೆಯನೇ ಮೂಲ ಚೈತನ್ಯ. ಈ ಮೂಲ ಚೈತನ್ಯ ಪುರುಷ ತನ್ನ ಅನೇಕ ಅಂಶಗಳನ್ನು ಸೃಷ್ಟಿಯಾದ ಕೋಟ್ಯಾಂತರ ಬ್ರಹ್ಮಾಂಡಗಳಿಗೆ ಕಳುಹಿಸುತ್ತಾನೆ.

ಇಂತಹ ಕೋಟ್ಯಾಂತರ ಬ್ರಹ್ಮಾಂಡಗಳಲ್ಲಿ ನಮ್ಮ ಬ್ರಹ್ಮಾಂಡವೂ ಒಂದು ಇದನ್ನು ಸೌರ ಬ್ರಹ್ಮಾಂಡವೆಂದು ಕರೆಯುತ್ತೇವೆ. ಇಂತಹ ಲೆಕ್ಕವಿಲ್ಲದಷ್ಟು ಸೌರ ಬ್ರಹ್ಮಾಂಡವನ್ನು ಒಳಗೊಂಡಿರುವುದೇ ಈ ಮಹಾನ್ ವಿಶ್ವ. ಆದ್ದರಿಂದಲೇ ಇದನ್ನು ಸೃಷ್ಟಿಸಿದ ಆದಿ ಚೈತನ್ಯವನ್ನು ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೆಂದು ನಮ್ಮ



ಹಿಂದಿನ ಋಷಿ ಮುನಿಗಳು ಕರೆದಿದ್ದಾರೆ. ತಮ್ಮ ತಪಸ್ಸಿನ ಶಕ್ತಿಯಿಂದ ಕೋಟಿಗಟ್ಟಲೆ ಬ್ರಹ್ಮಾಂಡಗಳಿವೆಯೆಂಬುದನ್ನೂ, ಇದಕ್ಕೆ ಕಾರಣಪುರುಷನಾದ ಅಗೋಚರ ಸರ್ವಶಕ್ತಿ ಸರ್ವವ್ಯಾಪಿ, ಸರ್ವಜ್ಞನಾದ ಅನಂತ ಶಕ್ತಿಯನ್ನೂ ಅರಿಯುವುದಲ್ಲದೆ ಅಂತಹ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡಿದ್ದರು.

ಆಧುನಿಕ ವಿಜ್ಞಾನವು ಅನಂತ ವಿಶ್ವದ ಬಗ್ಗೆ ಹಾಗೂ ಬ್ರಹ್ಮಾಂಡಗಳ ಬಗ್ಗೆ ಏನನ್ನು ಹೇಳುತ್ತದೆ ಎಂಬುದನ್ನು ವೈಜ್ಞಾನಿಕವಾಗಿ ಪರಿಶೀಲಿಸೋಣ. ಈ ಭೌತಿಕ ಜಗತ್ತಿನ ವಿಶಾಲತೆಯನ್ನು Astrophysics, Telescopical ಮತ್ತು Radio-Astronomy ಆದಷ್ಟುಮಟ್ಟಿಗೆ ಎತ್ತಿ ತೋರಿಸಿವೆ. ಅಮೆರಿಕಾದ ಕ್ಯಾಲಿಫೋರ್ನಿಯಾದಲ್ಲಿ ಮೌಂಟ್ ಪ್ಯಾಲಮರ್ ಎಂಬ ಪರ್ವತ ಶಿಖರದಲ್ಲಿ 'ಹೇಲ್' ಎಂಬ ವಿಶ್ವದಲ್ಲಿಯೇ ಅತಿದೊಡ್ಡದಾದ, 200 ಅಂಗುಲಗಳ ಉದ್ದವಿರುವ ದೂರದರ್ಶಕ ಯಂತ್ರವಿದೆ. ಈ ಯಂತ್ರದ ಮೂಲಕ ವಿಜ್ಞಾನಿಗಳು ಆಕಾಶದಲ್ಲಿ ಒಂದು ನೂರು ಕೋಟಿ ಬೆಳಕಿನ ವರ್ಷಗಳಷ್ಟು ದೂರದಲ್ಲಿರುವುದನ್ನು ನೋಡಬಲ್ಲವರಾಗಿದ್ದಾರೆ. ಬೆಳಕು ಒಂದು ಸೆಕೆಂಡಿಗೆ 3 ಲಕ್ಷ ಕಿ.ಮೀ. ದೂರ ಹೋಗುತ್ತದೆ. ಈ ವೇಗದಲ್ಲಿ ಬೆಳಕು ಒಂದು ವರ್ಷಕಾಲದಲ್ಲಿ ಕ್ರಮಿಸುವ ದೂರವನ್ನು ಒಂದು "ಬೆಳಕಿನ ವರ್ಷ" (One light year) ಎಂಬುದಾಗಿ ಮೂಲ ಮಾನವನ್ನು ಆಕಾಶದಲ್ಲಿ ದೂರವನ್ನಳೆಯಲು ಇಟ್ಟುಕೊಂಡಿದ್ದಾರೆ. ಈ ವೇಗದಲ್ಲಿ ಬೆಳಕು 100ಕೋಟಿ ವರ್ಷಗಳಲ್ಲಿ ಚಲಿಸುವ ದೂರದಲ್ಲಿರುವುದನ್ನು ಮೇಲ್ಕಂಡ ದೂರದರ್ಶಕ ಯಂತ್ರದಿಂದ ನೋಡಬಹುದಾಗಿದೆ. ಇಷ್ಟೆಲ್ಲಾ ನೋಡಿದರೂ ಇದೂ ಸಹ ಸಮಗ್ರ ವಿಶ್ವದ ಒಂದು ಸ್ವಲ್ಪ ಭಾಗ ಮಾತ್ರವೇ ಎಂದಾಗ ಮಹಾ ವಿಶ್ವದ ಕಲ್ಪನೆ ಎಷ್ಟೆಂಬುದನ್ನು ಊಹಿಸಲೂ ಅಸಾಧ್ಯವಾಗಿದೆ.

ಈ ದೂರದರ್ಶಕ ಯಂತ್ರದಲ್ಲಿ ಕಾಣುವ ಅಲ್ಪ ಭಾಗದಲ್ಲಿಯೇ 1000 ಕೋಟಿ ನಕ್ಷತ್ರ ಪುಂಜಗಳಿವೆಯೆಂದು ವಿಜ್ಞಾನಿಗಳು ಹೇಳುತ್ತಿದ್ದಾರೆ. ಇಂತಹ ಅಸಂಖ್ಯಾತ ನಕ್ಷತ್ರ ಪುಂಜಗಳಲ್ಲಿ ಒಂದು ಪುಂಜಕ್ಕೆ ನಮ್ಮ ಸೌರ ಬ್ರಹ್ಮಾಂಡ ಸೇರಿದೆ. ಇದನ್ನು ಆಕಾಶಗಂಗೆ (Milky way) ಎಂದು ಕರೆದಿದ್ದಾರೆ. ಈ ಒಂದು ನಕ್ಷತ್ರ ಪುಂಜದಲ್ಲಿಯೇ ಸೂರ್ಯನಂತಹ ನಕ್ಷತ್ರಗಳು 1000 ಕೋಟಿ ಇವೆ ಎಂದು ವಿಜ್ಞಾನಿಗಳು ಅಭಿಪ್ರಾಯ ಪಡುತ್ತಿದ್ದಾರೆ, ಉಳಿದ ಎಷ್ಟೋ ನಕ್ಷತ್ರ ಪುಂಜಗಳು ನಮ್ಮ ನಕ್ಷತ್ರ ಪುಂಜಗಳಿಗಿಂತಲೂ ದೊಡ್ಡವುಗಳು.

ಇಷ್ಟೇ ಅಲ್ಲದೆ (Radio Astronomy) ರೇಡಿಯೋ ಅಸ್ಟ್ರಾನಮಿ ಎಂದು ಇತ್ತೀಚಿನ ವಿಜ್ಞಾನಶಾಸ್ತ್ರ ನಮ್ಮನ್ನು ಇನ್ನು ಮುಂದೆ ಕರೆದೊಯ್ಯುತ್ತದೆ.

"ಆಸ್ಟ್ರೇಲಿಯಾದ ಸೌತ್‌ವೇಲ್ಸ್‌ನಲ್ಲಿ "ಪಾರ್ಕ್ಸ್ ವೀಕ್ಷಣ ಕೇಂದ್ರ" (Parkes Observatory) ಎಂಬುದೊಂದಿದೆ. ಇಲ್ಲಿ 210 ಅಡಿ ಎತ್ತರದ ರೇಡಿಯೋ ದೂರದರ್ಶಕ ಯಂತ್ರವೊಂದಿದೆ (Dish Radio Telescope) ಈ ಯಂತ್ರದ ಮೂಲಕ ಅತಿದೂರದ ನಕ್ಷತ್ರಗಳಿಂದ ಬರುವ ರೇಡಿಯೋ ಅಲೆಗಳನ್ನು ಹಿಡಿದು ಅವು ಎಷ್ಟು ದೂರದಿಂದ ಬಂದಿವೆ ಎಂಬುದನ್ನೂ ಸೂಚಿಸುತ್ತದೆ. 1967ರಲ್ಲಿ ಈಯಂತ್ರದ ಮೂಲಕ ಕಂಡು ಹಿಡಿದ ಕ್ವಾಸರ್ (Quasar) ಎಂಬ ನಕ್ಷತ್ರಗಳು ಭೂಮಿಯಿಂದ ಸುಮಾರು 1500 ಕೋಟಿ ಬೆಳಕಿನ ವರ್ಷಗಳಷ್ಟು ದೂರದಿಂದ ಬಂದಿವೆ ಎಂಬುದನ್ನು ತಿಳಿಸಿದಾಗ ವಿಶ್ವದ ಅನಂತತೆಯನ್ನು ಊಹಿಸಬಹುದಾಗಿದೆ.

ಅಮೆರಿಕಾದಿಂದ ಹಾರಿಸುತ್ತಿರುವ ಪರಿಶೋಧನಾ ಉಪಗ್ರಹಗಳಿಂದ ಈಗ ನಮಗೆ ತಿಳಿದುಬಂದಿರುವ ಅಂಶವೇನೆಂದರೆ, ಈ ಎಲ್ಲಾ ತಾಂತ್ರಿಕ ಜ್ಞಾನದಿಂದ ಕಂಡುಹಿಡಿದ ವಿಶ್ವವೂ ಸಹ ಸಂಪೂರ್ಣವಿಶ್ವನಲ್ಲ. ನಮಗೆ ತಿಳಿದಿರುವ ಈಗಿನ ಬ್ರಹ್ಮಾಂಡಕ್ಕಿಂತ ಇನ್ನೂ ಇದರ ಎಂಟರಷ್ಟು ಮಹಾನ್ ವಿಶ್ವ ಆವರಿಸಿರಬಹುದೆಂದು ಊಹಿಸಿದ್ದಾರೆ. ಅಂದರೆ ವಿಶ್ವದ ವಿಸ್ತಾರ 10,000 ಕೋಟಿ ಬೆಳಕಿನ ವರ್ಷಗಳು. ನಾವು ಒಂದು ಸೆಕೆಂಡಿಗೆ ಮೂರುಲಕ್ಷ ಕಿ ಮೀ. ವೇಗದಲ್ಲಿ ವಿಶ್ವದ ಒಂದು ಭಾಗದಿಂದ ಹೊರಟು ಅದೇ ವೇಗದಲ್ಲಿ ಎಲ್ಲಿಯೂ ನಿಲ್ಲದೆ 10,000ಕೋಟಿ ವರ್ಷಗಳಷ್ಟು ದೀರ್ಘಕಾಲ ಪ್ರಯಾಣ ಮಾಡಿದರೆ ವಿಶ್ವದ ಮತ್ತೊಂದು ಕೊನೆಯನ್ನು ಮುಟ್ಟಬಹುದು. ಇದನ್ನು ಊಹಿಸಿದಾಗ ಜಗತ್ತಿನ ವಿಶಾಲತೆ ಎಷ್ಟು ಅನಂತವಾಗಿದೆ ಎಂಬುದನ್ನು ಅರಿಯಬಹುದಾಗಿದೆ.

ಇಂತಹ ಅತಿಗಹನವಾದ ವಿಚಾರಗಳನ್ನು ನಮ್ಮ ಹಿಂದಿನ ಋಷಿಪುಂಗವರು ಸಾವಿರಾರು ವರ್ಷಗಳಷ್ಟು ಹಿಂದೆಯೇ ಯಾವ ಉಪಕರಣಗಳ ಸಹಾಯವೂ ಇಲ್ಲದೆ ಕೇವಲ ತಪಸ್ಸಿನ ಸಾಮರ್ಥ್ಯದಿಂದಲೇ ಅನಂತವಾಗಿರುವ ಈ ವಿಶ್ವದಲ್ಲಿ ಕೋಟಿ ಕೋಟಿ ಬ್ರಹ್ಮಾಂಡಗಳಿರುವುದನ್ನು ಅರಿತು, ಅತ್ಯದ್ಭುತವಾದ, ಅನಂತವಾದ ಮಹಾನ್ ವಿಶ್ವದ ಚೈತನ್ಯ ಪುರುಷನನ್ನು ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನೆಂದು ವರ್ಣಿಸಿರುವುದು ಸಮಂಜಸವೆನಿಸುತ್ತದೆಯಲ್ಲವೆ.

ಈ ವಿವರಗಳನ್ನು ಬ್ರಹ್ಮವಿದ್ಯಾ ಸಮಾಜದವರು ಪ್ರಕಟಿಸಿರುವ "ಜೀವನದ ಉದ್ದೇಶ"ವೆಂಬ ಪುಸ್ತಕದಿಂದ ಸಂಗ್ರಹಿಸಲಾಗಿದೆ. ಹೆಚ್ಚಿನ ಆಸಕ್ತಿಯುಳ್ಳವರು ಮೂಲ ಗ್ರಂಥವನ್ನೇ ಅಭ್ಯಸಿಸಬಹುದು.

ಸಿದ್ಧಗಂಗಾ



## ದೇವನೆಲ್ಲಿಹನು?

ಎಂ. ಎ. ನೀಲಾಂಬಿಕೆ, ಎಂ.ಎ., ೨೮೨ ಉತ್ತರಾದಿಮಠದ ರಸ್ತೆ, ಮೈಸೂರು-೪

"ಕಲ್ಲ ಮನೆಯಮಾಡಿ, ಕಲ್ಲ ದೇವರಮಾಡಿ
ಆ ಕಲ್ಲು ಕಲ್ಲ ಮೇಲೆ ಕಡೆದರೆ ದೇವರೆತ್ತ ಹೋದರೊ,
ಲಿಂಗ ಪ್ರತಿಷ್ಠೆ ಮಾಡಿಸುವಗೆ ನಾಯಕನರಕ ಕಾಣಾ"

ಪ್ರಭುದೇವರು ಈ ಮಾತನ್ನು ಯಾರಿಗೆ ಹೇಳಿರಬಹುದು. ಕರ್ಮಯೋಗಿ ಸಿದ್ಧರಾಮ ವಡ್ಡರಾಮನಂತೆ ವೃಥಾ ವ್ಯರ್ಥವಾದ ಕಾರ್ಯ ಕೈಗೊಂಡನೆಂದರಿತು, ಇಡೀವಿಶ್ವವನ್ನು ಆವರಿಸಿರುವ ಲಿಂಗಯ್ಯನನ್ನು ಕಲ್ಲು ಮನೆಯಮಾಡಿ ಆ ಆಲಯದಲ್ಲಿ ಬಂಧನಗೊಳಿಸಲು ಹೊರಟ, ಅವನ ಸ್ಥಿತಿಗೆ ನಕ್ಕು ಲಿಂಗಯ್ಯನಿಗೂ ಈ ಸ್ಥಿತಿ ಬಂತಲ್ಲ ಎಂದು ಚಿಂತಿಸಿ ಪ್ರಭು ಹೇಳಿರಬೇಕು.

ಅಷ್ಟಕ್ಕೆ ನಿಲ್ಲಲಿಲ್ಲ ಪ್ರಭುವಾಣಿ 'ದೇಹದೊಳಗೆ ದೇವಾಲಯವಿರಲು ಬೇರೆ ದೇವಾಲಯವೇಕಯ್ಯ, ನೀನು ಕಲಾದರೆ ನಾನೇನಪ್ಪೆನಯ್ಯ' ನಿಜ ಶಿವನೇ ಕಲ್ಲಾದ ಮೇಲೆ ಭಕ್ತಕಗ್ಗಲ್ಲು ತಾನೆ? ಈ ದೇಹವೇ ದೇವಾಲಯವಾಗಿರುವಾಗ ಅಲ್ಲಿ ಶಿವನ ನಿಟ್ಟು ಪೂಜಿಸುವುದ ಮರೆತು ಬೇರೆ ದೇಗುಲಕಟ್ಟಿ ಅದರಲ್ಲಿ ಮುಕ್ತಿ ಪಡೆವ ಹಂಬಲವೇಕೆ ಬೇಕು?

ಶರಣರು ದೇಹವನ್ನು ದೇವಾಲಯವಾಗಿಸಿದರು. ಇವರ ದೃಷ್ಠಿಯಲ್ಲಿ ಕಟ್ಟಿದಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗುವುದು ಸರಿಯಲ್ಲ. ಆ ಕಾರಣ ಶಿವನನ್ನು ತಮ್ಮ ದೇಹ ದೇಗುಲದಲ್ಲಿ ನೆಲೆಗೊಳಿಸಿದರು, ಆ ಕಾರಣ ಅವರ ದೃಷ್ಠಿಯಲ್ಲಿ ದೇಗುಲಕ್ಕೆ ಹೋಗುವುದು ಸಲ್ಲದು ಅಲ್ಲಿ ಹೋದರೂ ಪೂಜಾರಿ ಎಂಬ ಮಧ್ಯವರ್ತಿಯ ಕೈ ಕಾಯಬೇಕಾಗುತ್ತದೆ. ಈ ರೀತಿ ಪೂಜೆ ಮಾಡಿದ ಪುಣ್ಯಪೂಜಾರಿಗೆ ಸಿಗುತ್ತದೆ. ಪೂಜೆ ಮಾಡಿಸಿದವರಿಗಲ್ಲ. ಆ ಕಾರಣ ತನ್ನಾಶ್ರಯದ ರತಿ ಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಲಿ ಮಾಡಿಸಬಹುದೆ? ಎಂದು ಪ್ರಶ್ನಿಸಿದರು. ಮಾಡುವ ಕಾಯಕವೇ ಶಿವಪೂಜೆ ಎಂದರು.

ಗುಡಿಗೋಪುರಗಳನ್ನು ಕಟ್ಟಿ ಅಲ್ಲಿ ಶಿವನನ್ನು ನೆಲೆಗೊಳಿಸುವೆ ಎಂದರೆ ಇರುವನೇ ಅವನಲ್ಲಿ. ಸರ್ವಾಂತರ್ಯಾಮಿ ಆದ ಅವನನ್ನು ದೇಗುಲಗಳೆಂಬ ಸೆರೆ ಮನೆಯಲ್ಲಿ ಆ ರಕ್ಷಕ ಪೂಜಾರಿಯ ಕಾವಲಿನಲ್ಲಿ ಬಂಧಿಸುವೆನೆಂಬ ಹೆಮ್ಮೆಯಲ್ಲಿ ನಮ್ಮನ್ನು ನೋಡಿ ಆ ದೈವ ಗಹ ಗಹಸಿ ನಗುತ್ತಾನೆ? ಆ ಪೂಜಾರಿಯಾದರೋ ದೇಗುಲದ ಒಳಗೆ ಬಡವರನ್ನು ಬಿಡುವುದೇ ಇಲ್ಲ. ದಕ್ಷಿಣೆಯ ಕೊಟ್ಟರೆ ತಕ್ಷಣವೇ ಬಿಡುವನು.

ಹಣಕಾಗಿ ಇಹನು ಅವನು ||
ಬಡವನಾ ಬಳಿಯಲ್ಲಿ ಹಣವಿಲ್ಲ ಏನಿಲ್ಲ
ಒಳಗೆ ಬರೆ ದಾರಿಯಿಲ್ಲ ||
ದೇಗುಲಗಳೆಂಬ ಪಂಜರವ ಬಿಟ್ಟು ನೀ
ಬಡವರ ಬಳಿಗೆ ಬಾರಾ ||
ಅವರ ಕಂಬನಿ ಒರೆಸಿ ಸಂತಸವ ನೀಡುತ್ತ
ನೋವ ನೀ ನೀಗು ಬಾರಾ ||

ಹೀಗೆ ಅನುದಿನ ಬಡವರು ಹಂಬಲಿಸಿದರೂ ವ್ಯರ್ಥವಾಗಿದೆ ಇಂದು. ಇದಕ್ಕೆ ಕಾರಣ ಅವನು ದೇಗುಲದಲ್ಲಿ ಇದ್ದರೆತಾನೆ. ಅವನಿಹನು ಎಮ್ಮ ಹೃನ್ಮಂದಿರದಿ. ಅಲ್ಲಿ ಕಾಣುವ ಕಣ್ಣು ನಮಗಿರಬೇಕಷ್ಟೆ. ಅವನಿಗೆ ಬೇಕು ನಿರ್ಮಲವಾದ ಭಕ್ತಿ ಅಚಲವಾದ ನಿಷ್ಠೆ. ನಮ್ಮ ಬಳಿ ಇಹ ಐಶ್ವರ್ಯವಲ್ಲ.

ಶ್ರೀ ಸಿದ್ಧೇಶ್ವರ ಸ್ವಾಮಿಗಳವರು ಹೇಳುತ್ತಿದ್ದ ಒಂದುಕತೆ ಇಲ್ಲಿ ನೆನಪಾಗುತ್ತದೆ. ಒಬ್ಬ ಧನಿಕ ಸಾಕಷ್ಟು ಹಣ ಖರ್ಚು ಮಾಡಿ ಭವ್ಯ ದೇಗುಲ ನಿರ್ಮಿಸಿದ. ಮೂರ್ತಿ ಅನಾವರಣೆಯದಿನ ಅವನಿಗೆ ಸಗ್ಗ ಕೈಗೆಟುಕುವಷ್ಟು ಸಂತಸ. ಇಂಥ ಭವ್ಯಮಂದಿರದಿಂ ದೇವ ಎಂದೂ ಹೊರಹೋಗನೆಂಬ ಅಚಲನಂಬಿಕೆ. ಅಂತೆ ಸಂತಸದಿ ನಿದ್ದೆ ಹೋದನು ಧನಿಕ. ರಾತ್ರಿ ಕನಸಿನಲಿ ಕಂಡ ದೈವವ ಕೇಳಿದನು "ಸೊಗಸಲ್ತೆ ದೇವಾ ನಾ ಕಟ್ಟಿದ ನಿನ್ನ ಆಲಯವು" ದೇವನು ಸಮಾಧಾನವಾಗಿ ಹೇಳಿದನು. ನೀನು ಕಟ್ಟಿದ ಗುಡಿಯ ನಾನು ನೋಡಲೇ ಇಲ್ಲ ಎಂದು. ಆಗ ಧನಿಕನಿಗೆ ಅಚ್ಚರಿ. ಕೇಳಿದನು ದೇವರನ್ನು ಎಲ್ಲಿ ಹೋಗಿದ್ದೆ ನೀನು. ಆಗ ಹೇಳಿದ ದೇವ ನೋಡು ಮಗು ನನಗೆ ಬೇಕಿಹುದು ನಿನ್ನಭವ್ಯ ಆಲಯವಲ್ಲ ನಾನು ನಿನ್ನ ಆಲಯಕ್ಕಿಂತ ಭವ್ಯ ದೇಗುಲದ ಬಾಗಿಲದು ತೆರೆದಿತ್ತ ಅಕ್ಷಣ ಅಲ್ಲಿ ನೆಲಸಿದ್ದೆ. ಅದೇಗುಲವಾದರೊ, ನಿನ್ನ ಗುಡಿಕಟ್ಟೆ ಕ್ಷಣ ಕ್ಷಣ ನನ್ನ ನೆನೆಯುತ್ತ ಮನದಲ್ಲಿ ಸ್ಮರಿಸುತ್ತ ನಿನ್ನ ಗುಡಿಯೊಳಗೆ ಬರಲಾಗದ ಶಿಲ್ಪಗಾರನ ವಿಶಾಲ ಹೃದಯದ ಬಾಗಿಲು ತೆರೆದಿತ್ತ ನೆಲೆಸಿ ಧನ್ಯನಾದನು. ಈ ಮಾತನ್ನು ಕೇಳುತ್ತ ಮೂಕನಾದನು ಧನಿಕ.

ಕಥೆ ಏನೇ ಇರಲಿ ದೇವರಿಗೆ ಬೇಕಿಹುದು ವಿಶಾಲ ಹೃನ್ಮಂದಿರ. ಅವನನ್ನು ಕಾಣಲು ದೇಗುಲಕ್ಕೆ ಹೋಗಬೇಕಿಲ್ಲ ಸಚರಾಚರನಾದನನ್ನು ಇದ್ದಲ್ಲಿಯೇ ಕಾಣುವ ನಿಷ್ಠೆ ಬೇಕು.



ಒಬ್ಬ ಬಾಲಕ ದೇಗುಲಕ್ಕೆ ಹೊರಟ ಆತನಿಗೆ ಉತ್ತಮರೆಂಬ ಅಹಂನಲ್ಲಿ ಮುಳುಗಿದ್ದ ಜನ ಒಳಗೆ ಬಿಡಲೇ ಇಲ್ಲ. ಎಲ್ಲ ದೇಗುಲದ ಬಳಿಗೂ ಹೋಗಿ ನಿರಾಶನಾದ ಕೊನೆಗೆ ಊರ ಹೊರಗಿನ ತೋಪು, ಅಲ್ಲಿ ಕುಳಿತು ಕಣ್ಣೀರು ಸುರಿಸಿದ. ಆಗ ತಂಗಾಳಿ ಮೆಲ್ಲನೆ ಬೀಸಿತು. ಆತನ ಆಯಾಸ ಪರಿಹಾರವಾಗಿತ್ತು. ಅಕ್ಷಣ ಹೊಸದೇನನ್ನೊ ಕಂಡಂತೆ ಭಾಸವಾಯಿತು. ಆ ತಂಗಾಳಿಯಾಗಿ ದೈವ ಅವನಿಗೆ ಪ್ರತ್ಯಕ್ಷವಾಗಿತ್ತು. ದೇವರು ಜಗತ್ತಿನೆಲ್ಲೆಡೆ ಅಣುರೇಣು ತೃಣ ಕಾಷ್ಠಗಳಲ್ಲಿ ಅಡಕವಾಗಿದ್ದಾನೆಂಬ ಸತ್ಯ ಗೋಚರಿಸಿತು.

ಅದರ ಅರಿವಿದ್ದರೂ ಆತನನ್ನು ಬಂಧಿಸುವ ಕಾರ್ಯ ಮಾನವ ಮಾಡುತ್ತಾನೆ. ಒಮ್ಮೆ ಒಬ್ಬ ಸಂತ ವಿಶಾಲವಾದ ಬಯಲಿನಲ್ಲಿ ಧ್ಯಾನಮಗ್ನನಾಗಿ ಕುಳಿತ. ಆತನಿಗೆ ಬಾಹ್ಯದ ಅರಿವೇ ಇರಲಿಲ್ಲ. ಬಂದ ಜನ ಮಾರ್ಗದಲ್ಲಿದ್ದ ಆತನನ್ನು ನೋಡಿ ಭಕ್ತಿಯಿಂದ ನಮಿಸಿದರು. ದಿನ ದಿನಕ್ಕೆ ಜನರ ಸಂಖ್ಯೆಹೆಚ್ಚಿತು. ಅಂತೆ ಭಕ್ತಿಯೂ ಹೆಚ್ಚಿತು. ಊರಿನ ಮಂಖಂಡ ಎಲ್ಲರೊಡನೆ ಮಾತಾಡಿ ಆತನ ಧ್ಯಾನಕ್ಕೆ ಭಂಗ ಬರದಂತೆ ಸುತ್ತ ಒಂದು ಆಲಯ ನಿರ್ಮಿಸಿದರು. ಆ ಸಂತನನ್ನು ಆತ ಕಾಣುವ ದೈವವನ್ನು ತಮ್ಮ ಎದುರಿನಲ್ಲಿ ಇರಿಸಿಕೊಳ್ಳುವ ಇಚ್ಛೆ ಅವರದು. ಅಂತೆ ಒಂದೆರೆಡುದಿನಕಳೆಯಿತು. ಸಂತ ಬಹಿರ್ಮುಖನಾಗಿ ಕಣ್ತೆರೆದು ನೋಡಿದ ಆಶ್ಚರ್ಯವಾಯಿತು. ತಾನು ಕುಳಿತಾಗ ಈ ಆಲಯವಿರಲಿಲ್ಲ ಈಗ ಏಕೆ ನಿರ್ಮಾಣವಾಯಿತು ? ಭಕ್ತರನ್ನು ಕೇಳಿದ ಆಗ ಅವರು ಹೇಳಿದರು. ಸ್ವಾಮಿ ತಾವು ಇಲ್ಲಿ ಕುಳಿತು ದೈವವನ್ನು ಕಂಡಿರಿ ಆತನನ್ನು ಈ ಊರಿಂದ ಅಗಲಿಸದೆ ಇರಲು ಶಾಶ್ವತವಾಗಿ ಇಲ್ಲಿಯೆ ಇಟ್ಟು ಕೊಳ್ಳುವ ಉದ್ದೇಶದಿಂದ ಈ ಆಲಯ ನಿರ್ಮಾಣ ಮಾಡಿದೆವೆಂದು ಬಿನ್ನವಿಸಿದರು. ಅವರ ಈ ತಿಳುವಳಿಕೆಗೆ ಸಂತ ನಕ್ಕು ಹೇಳಿದ. ಈ ರೀತಿ ದೇವರನ್ನು ಬಂಧಿಸಲಾದೀತೆ ? ಅವನು ಸರ್ವಾಂತರ್ಯಾಮಿ. ದೇವರು ಆಲಯದಲ್ಲಿಲ್ಲ. ಅವನನ್ನು ನೀವು ಎಲ್ಲೆಡೆ ನೋಡಬಹುದು. ಸೂಸುವ ತಂಗಾಳಿಯಲ್ಲಿ, ಪುಷ್ಪದಲ್ಲಿ, ಸಹಾಯ ಮಾಡಿದ ಚೇತನಗಳಲ್ಲಿ ಎಲ್ಲೆಡೆ ಕಾಣಬಹುದು ಕಾಣುವ ಕಣ್ಣು ಬೇಕಪ್ಪಾ, ಎಂದು ಹೇಳುತ್ತ ಹೊರಗೆ ಬಯಲಿಗೆ ಬಂದು ಆ ಬಯಲಲ್ಲಿ ಲೀನವಾದ. ಬಯಲೇ ದೇವರೆಂದು ತೋರಿಸಿದ.

ಆಕಾರಣ ಆದೈವವನ್ನು ಮನವೆಂಬ ಆಲಯದಲ್ಲಿ ಪ್ರತಿಷ್ಠಾಪಿಸಬೇಕು. ಚೆನ್ನಬಸವಣ್ಣನವರು ಮಾಡಿದ ಪೂಜೆ ಕಟ್ಟಿದಗುಡಿ ಎಂಥದು ಕೇಳಿ

"ಎನ್ನ ತನುವೇ ಅಗ್ಘವಣಿಯ ಬಿಂದಿಗೆ ; ಮನವೇ ಸಿಂಹಾಸನ
ಎನ್ನ ಹೃದಯ ಕಮಲವೇ ಪುಷ್ಪ. ಎನ್ನ ಕಿವಿಗಳೇ ಕೀರ್ತಿಮುಖ.
ನುಡಿದ ನಾಲಿಗೆ ಗಂಟೆ ಶಿರವೇ ಸುವರ್ಣ ಕಳಸ

ಎನ್ನ ನಯನವೇ ಸ್ವಯಂ ಜ್ಯೋತಿ ಆರತಿ
ಎನ್ನ ಕಾಯ ಬಾಜನವೀ ಪರಿಯಾಯಿತ್ತಾಗಿ
ಕೂಡಲ ಸಂಗಯ್ಯನ ಪೂಜಿಸಿದಲ್ಲದೆ ನಿಲ್ಲಲಾರೆನು"

ಎಂಥ ಸುಂದರವಾದ ದೃಶ್ಯ. ಅಂತೆ ಅಣ್ಣನವರು ತಾವು ಕಟ್ಟಿ ದೇಗುಲದ ಬಗ್ಗೆ ಹೀಗೆ ಹೇಳುತ್ತಾರೆ ಕೇಳಿ.

ಉಳ್ಳವರು ಶಿವಾಲಯವ ಮಾಡುವರು.
ನಾನೇನು ಮಾಡಲಿ ಬಡವನಯ್ಯಾ
ಎನ್ನ ಕಾಲೇಕಂಬ ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯ............ಹೀಗೆ ದೇಹ ದೇವಾಲಯ-

ವಾಗಿಸಿ ಕೂಡಲ ಸಂಗನನ್ನು ನೆಲೆಗೊಳಿಸಿದ್ದಾರೆ. ಈಶಕ್ತಿ ಅಣ್ಣನೊಬ್ಬನಿಗೇ ಸಾಧ್ಯ.

ಇಂದುದೇವಾಲಯ ಮೌಢ್ಯತೆಯ ನೆಲೆಗೊಳಿಸುವ ಬೀಡಾಗುತ್ತಿವೆ. ಪೂಜಾರಿ ಇಲ್ಲದ ಕತೆಗಳ ನಿರ್ಮಾತೃವಾಗಿ ಮೆರೆಯುತ್ತಾನೆ. ಅಲ್ಲಿ ಹೋದರೂ ನಮ್ಮಲ್ಲಿ ನಿಷ್ಠೆ ಎಷ್ಟರಮಟ್ಟಿಗೆ ಇರುತ್ತದೆ. ಈ ಬಗ್ಗೆ ಶರಣರ ಹೇಳಿಕೆಯನ್ನು ಹಾಗದ ಕೆರವ ಧರಿಸಿ ದೇಗುಲಕ್ಕೆ ಹೋದರೆ ದೇವರ ಧ್ಯಾನದ ಬದಲು ಕೆರದ ಧ್ಯಾನ ಮಾಡುತ್ತೇವೆ. ಎಂಥ ಸತ್ಯವಾದ ಮಾತು ಆಕಾರಣ ನಮ್ಮ ಪೂಜೆ ನಾವು ಮನೆಯಲ್ಲಿ ಸಮಯ ಸಿಕ್ಕಾಗ ಮಾಡಿದಲ್ಲಿ, ಸಮಯವೂ ಇಲ್ಲದಿದ್ದಲ್ಲಿ ಕಾಯಕವೇಶಿವಪೂಜೆ ಎಂದರಿವ ನಿಷ್ಠೆಯಿದ್ದಲ್ಲಿ ಆ ಶಿವನನ್ನು ಕಾಣಬಹುದು ಎಂದರು ಶರಣರು.

ಇಂದಿನ ಈ ವೈಜ್ಞಾನಿಕ ಯುಗದಲ್ಲೂ ಅನೇಕ ಧರ್ಮಗಳ, ಮಠಗಳ, ಒಳಪಂಗಡಗಳ, ಪೂಜೆಗಳ ಜಂಜಾಟಕ್ಕೆ ಸಿಲುಕಿ ಮಾನವ ಉತ್ತಮ ಗುಣಗಳಾದ ವಾತ್ಸಲ್ಯ ಸೌಧವನ್ನು ಉರುಳಿ ಸುತ್ತಿದ್ದೇವೆ. ದಿನವು ಒಂದಿಲ್ಲೊಂದು ಜಂಜಾಟದ ದಾಳಿ ನಮ್ಮನ್ನಾವರಿಸುತ್ತಿದೆ. ಇದನ್ನು ಹೋಗಲಾಡಿಸಿ ಶಾಂತಿ ಸೌಹಾರ್ದತೆಯ ಸೌಧ ನಿರ್ಮಿಸಲು ಎಲ್ಲರೂ ಒಂದೇ ಎಂಬ ಭಾವನೆ ಬೇರೂರಬೇಕು. ಈ ಭಾವನೆ ಒಡ ಮೂಡಲು ಶರಣರ ನಡೆನುಡಿ ದಾರಿ ದೀಪವಾಗಿದೆ





# ಪ್ರಚಾರ

ಜಿ. ಶಾರದಾರಾಜಶೇಖರ್, 847, 4ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40

ಈ ಯುಗವನ್ನು ಪ್ರಚಾರ ಯುಗವೆಂದೇ ಕರೆಯಬಹುದಾಗಿದೆ. ಉದ್ದೇಶ ಪೂರ್ವಕವಾಗಿ ಜನರ ಅಭಿಪ್ರಾಯಗಳನ್ನು ಮತ್ತು ನಂಬಿಕೆಗಳನ್ನು ಬದಲಾಯಿಸಲು ಮಾಡುವ ಪ್ರಯತ್ನಗಳಿಗೆ ಮತ್ತು ಉಪಯೋಗಿಸುವ ತಂತ್ರ ಮತ್ತು ಯುಕ್ತಿಗಳಿಗೆ ಪ್ರಚಾರವೆಂದು ಹೆಸರು"

ಜನರಅಭಿಪ್ರಾಯಗಳನ್ನು ಮಾರ್ಪಾಟು ಮಾಡುವುದರಿಂದ ಅನೇಕ ಸಂಸ್ಥೆಗಳಿಗೆ ಲಾಭವುಂಟು. ಮತಪ್ರಚಾರ ಬಹಳಹಿಂದಿನ ಕಾಲದಿಂದಲೂ ನಡೆಯುತ್ತಾ ಬಂದಿದೆ. ಗಿರಣಿ ಮತ್ತು ಕಾರ್ಖಾನೆಗಳ ಮಾಲೀಕರು ತಾವುಉತ್ಪಾದಿಸಿದ ವಸ್ತುಗಳನ್ನು ಹೆಚ್ಚು ಹೆಚ್ಚಾಗಿ ಮಾರಾಟಮಾಡಿ ಲಾಭಸಂಪಾದನೆ ಮಾಡಲು ದಿನ,ವಾರ, ಅಥವಾ ಮಾಸ ಪತ್ರಿಕೆಗಳಲ್ಲಿ ಮತ್ತು ರೇಡಿಯೋ ಟಿ.ವಿ. ಸಿನಿಮಾಗಳ ಮೂಲಕ ಜಾಹಿರಾತುಗಳನ್ನು ಪ್ರದರ್ಶಿಸುತ್ತಿದ್ದಾರೆ.

ಪ್ರಜಾಪ್ರಭುತ್ವವಿರುವ ರಾಷ್ಟ್ರಗಳಲ್ಲಿ ರಾಜಕಾರಣಿಗಳು ತಮ್ಮ ಪಕ್ಷದ ಧ್ಯೇಯ ಮತ್ತು ಮಾರ್ಗಗಳನ್ನು ಭಾಷಣಗಳಮತ್ತು ಪತ್ರಿಕೆಗಳಲ್ಲಿ ಬರಹಗಳ ಮೂಲಕ ಜನರಿಗೆ ತಿಳಿಸುತ್ತಾ ಪ್ರಜೆಗಳಅಭಿಪ್ರಾಯಗಳು ತಮ್ಮಪಕ್ಷಕ್ಕೆ ಅನುಕೂಲವಾಗಿರುವಂತೆ ಮಾಡಲು ಪ್ರಯತ್ನ ಮಾಡುತ್ತಿದ್ದಾರೆ. ಪ್ರೇಕ್ಷಕರನ್ನು ಆಕರ್ಷಿಸಲು ಸಿನಿಮಾ ತಯಾರಕರು ಲಕ್ಷಾಂತರ ರೂಪಾಯಿಗಳನ್ನು ಜಾಹಿರಾತುಗಳಿಗೆ ಖರ್ಚು ಮಾಡುತ್ತಿದ್ದಾರೆ.

ಸರ್ಕಾರಗಳು ಕೂಡ ತಾವು ಕೈಗೊಳ್ಳಲಿರುವ ಸಮಾಜೋದ್ಧಾರ ಕಾರ್ಯಗಳಿಗೆ ಮಿತಸಂತಾನ ಯೋಜನೆ, ಸಾಕ್ಷರತಾ ಯೋಜನೆ ಮುಂತಾದವುಗಳಿಗೆ ಜನರ ಬೆಂಬಲ-ವನ್ನು ಸಂಪಾದಿಸಲು ಅನೇಕ ಸಾಧನೆಗಳನ್ನು ತಂತ್ರಗಳನ್ನು ಬಳಸುತ್ತಿದ್ದಾರೆ. ಶಿಕ್ಷಕರು ಜ್ಞಾನ ಪ್ರಸಾರ ಮಾಡುವುದರಮೂಲಕ ವಿದ್ಯಾರ್ಥಿಗಳಅಭಿಪ್ರಾಯ ಮತ್ತು ವರ್ತನೆಗಳಲ್ಲಿ ಬದಲಾವಣೆಯನ್ನು ತರಲು ಪ್ರಯತ್ನ ಮಾಡುತ್ತಾರೆ. ಕೆಲವು ಸಮಯಗಳಲ್ಲಿ ಶಿಕ್ಷಣವು ಪ್ರಚಾರವಾಗುತ್ತದೆ. ಪ್ರಚಾರವೂ ಶಿಕ್ಷಣವಾಗಬಹುದು. ಪ್ರಚಾರದಬಗ್ಗೆ ಜನರಿಗೆ ಅಪನಂಬಿಕೆ ಇರುವುದರ ಜೊತೆಗೆ ಅದುಬರಿಯ ಮೋಸವೆಂಬ ಭಾವನೆಯೂಉಂಟು. ಅಭಿಪ್ರಾಯಗಳನ್ನು ಬದಲಾಯಿಸಲು ಮಾಡುವ ಅನೇಕ ಪ್ರಯತ್ನಗಳನ್ನು "ಬರಿಯ ಪ್ರಚಾರ"ವೆಂದು ಹೇಳಿ ತಿರಸ್ಕರಿಸುವುದನ್ನು ಆಗಾಗ್ಗೆ ಕಾಣಬಹುದು. ಪ್ರಚಾರಕರು ತಮ್ಮ ಗುರಿಯನ್ನು ಸಾಧಿಸಲು ಸುಳ್ಳುಹೇಳುವುದಕ್ಕೂ ಮೋಸ ಮಾಡುವುದಕ್ಕೂ ಹೇಸುವುದಿಲ್ಲ. ಪ್ರಚಾರಕರಿಗೆ ಲಾಭ ಸಂಪಾದನೆಯ ಮೇಲೆ ದೃಷ್ಟಿಯು ಹೆಚ್ಚಾಗಿರುತ್ತದೆ. ಸ್ವಾರ್ಥ ಸಾಧನೆಗೆ ಗಮನಹೆಚ್ಚು.

ಪ್ರಚಾರವು ಒಂದು ಪ್ರಭಾವ ಪೂರ್ಣವಾದ ಸಾಧನವಾದ್ದರಿಂದ ಅದಕ್ಕೆ ಸಮಾಜದಲ್ಲಿ ದೊಡ್ಡದಾದ ಸ್ಥಾನವನ್ನೇ ಕೊಡಬೇಕಾಗುತ್ತದೆ. ಮಾನವ ಸಮಾಜವು ಹೆಚ್ಚು ಸಂಕೀರ್ಣವಾಗಿ, ಯಂತ್ರೀಕರಣದ ಪ್ರಭಾವದಿಂದ ಬೃಹದಾಕಾರದ ನಗರ ಸಮಾಜಗಳು ಬೆಳೆದಂತೆಲ್ಲಾ ಪ್ರಜೆಗಳ ವರ್ತನೆಯ ಮೇಲೆ ಸಾಮೂಹಿಕ ಮಾಧ್ಯಮಗಳ ಅವುಗಳ ಮೂಲಕ ಪ್ರಚಾರದ ಪ್ರಭಾವವು ವೃದ್ಧಿಯಾಗುತ್ತಿದೆ. ದೈನಿಕ ಅಗತ್ಯಗಳಿಗೆ ಬೇಕಾಗುವ ಸರಕುಗಳನ್ನು ಕೊಳ್ಳುವಾಗ ಔಷಧಿಗಳನ್ನು ಕೊಳ್ಳುವಾಗ ಪುಸ್ತಕಗಳನ್ನು ಆರಿಸಿಕೊಳ್ಳಬೇಕಾದಾಗ, ಚುನಾವಣೆಯಲ್ಲಿಮತದಾನ ಮಾಡುವಾಗ, ಇನ್ನೂ ಇಂತಹ ಅನೇಕ ಪರಿಸ್ಥಿತಿಗಳಲ್ಲಿ ಮಾನವರಆಯ್ಕೆ ತುಲನೆಮತ್ತು ತೀರ್ಮಾನಗಳನ್ನು ಪ್ರಚಾರವೇ ಹೆಚ್ಚಾಗಿ ನಿರ್ಧರಿಸುತ್ತದೆ.

ಪ್ರಚಾರ ಚತುರರು ಸಂದರ್ಭಕ್ಕೆ ಅನುಗುಣವಾದ ಭಾಷೆಯನ್ನು ಬಳಸಿ ಜನರ ನಂಬಿಕೆಗಳನ್ನು ಮಾರ್ಪಡಿಸಿ ಅವರ ವರ್ತನೆಯನ್ನು ನಿಯಂತ್ರಣ ಮಾಡಬಲ್ಲರು

ಪ್ರಚಾರಕ್ಕೆ ಸುಲಭವಾಗಿ ಬಲಿಯಾಗುವವರು ಅವಿದ್ಯಾವಂತರು. ವಿದ್ಯಾವಂತರು ಕೂಡ ತಮಗೆ ತಿಳಿಯದ ವಿಷಯಗಳಲ್ಲಿ ಪ್ರಚಾರದ ಪ್ರಭಾವಕ್ಕೊಳಗಾಗುತ್ತಾರೆ. ಆದ್ದರಿಂದ ಜನರಲ್ಲಿ ಜ್ಞಾನವೃದ್ಧಿ ಮಾಡುವುದು ಬಹಳ ಮುಖ್ಯವೆಂದು ಹೇಳಬಹುದು ಶಿಕ್ಷಣದ ಮೂಲಕ ಜನರಲ್ಲಿ ವಿಮರ್ಶಾಜ್ಞಾನವನ್ನು ಬೆಳೆಸಿ ಬಹುಮಟ್ಟಿಗೆ ಪ್ರಚಾರದ ಪ್ರಭಾವವನ್ನು ತಡೆಗಟ್ಟ ಬಹುದು.

---

## ಆಜೀವ ಸದಸ್ಯರಲ್ಲಿ ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವಸದಸ್ಯರುಗಳ ವಿಳಾಸಗಳು ಬದಲಾ
ಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು
ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು
ನಿಮ್ಮಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ
ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರಮುಖೇನ
"ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು
ಸಹಕರಿಸಬೇಕಾಗಿ ಪ್ರಾರ್ಥನೆ.

**ತಮ್ಮ ಸದಸ್ಯತ್ವದ ನಂಬರನ್ನು**
**ತಪ್ಪದೆ ಬರೆಯಿರಿ.**



# ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು

ಕವಿತಾಕೃಷ್ಣ, ಅಧ್ಯಕ್ಷರು ಜಿ.ಕ.ಸಾ. ಪರಿಷತ್ತು, ತುಮಕೂರು

'ಅಭಿನವ' ಕಾಳಿದಾಸ' ಬಿರುದಾಂಕಿತರಾಗಿದ್ದ ಬಸವಪ್ಪ ಶಾಸ್ತ್ರಿಗಳು ಕನ್ನಡ ಸಾರಸ್ವತ ಲೋಕದ ಓರ್ವ ಧೃವತಾರೆ. ಪ್ರಕಾಂಡ ಪಂಡಿತರಾದ ಅವರ ಹೆಸರೇ ಒಂದು ಚೈತನ್ಯದ ಜಲಪಾತ. ಪ್ರಾಚೀನ ಪರಂಪರೆಯ ಸಾಹಿತ್ಯ ಸಂಸ್ಕೃತವಾಹಿನಿ ಯೊಡನೆ ಪಾಶ್ಚಾತ್ಯ ಇಂಗ್ಲೀಷ್ ಸಾಹಿತ್ಯದ ಉಪನದಿ ಒಂದು ಸಂಗಮಗೊಂಡಂತಹ ಕಾಲದಲ್ಲಿ ಶಾಸ್ತ್ರಿಗಳು ನೀಡಿದ ಕೊಡುಗೆ ತುಂಬಾ ಗಮನಾರ್ಹವಾದದು. ನಾಟಕ ಸಾಹಿತ್ಯವನ್ನು ಔನತ್ಯಸ್ತರವೇರಿಸಿದ ಶಾಸ್ತ್ರಿಗಳು ಹತ್ತಾರು ಕನ್ನಡದ ಸ್ವತಂತ್ರ ಕೃತಿಗಳನ್ನು ನೀಡಿದರಲ್ಲದೆ, ಅಸಂಖ್ಯಾತ ಭಾಷಾಂತರ ಕೃತಿಗಳನ್ನು ನೀಡಿ ಪರಮೋಪಕಾರವೆಸಗಿದರು, ಅವರು ಕನ್ನಡ-ಸಾಹಿತ್ಯ ಲೋಕಕ್ಕೆ ನೀಡಿದ ಕೊಡುಗೆ ಅಸಾಮಾನ್ಯವಾದುದು. ರಾಜಾಶ್ರಯವನ್ನು ದೊರಕಿಸಿಕೊಂಡು ಸುಮಾರು ಮುವತ್ತಕ್ಕೂ ಹೆಚ್ಚಿನ ಕೃತಿಗಳನ್ನು ಬರೆದು ಸಾಹಿತ್ಯ ಭಂಡಾರವನ್ನು ತುಂಬಿ ಹೋಗಿದ್ದಾರೆ. ಕನ್ನಡ – ಸಂಸ್ಕೃತ – ಇಂಗ್ಲಿಷ್ ಭಾಷೆಗಳಲ್ಲಿ ಅದ್ವಿತೀಯ ಪಾಂಡಿತ್ಯ ಹೊಂದಿದ್ದ ಶಾಸ್ತ್ರಿಗಳು ನಾಡಿನಿಂದ ಅಗಲಿ ಇಂದಿಗೆ ಒಂದು ಶತಮಾನ ಉರುಳಿದೆ.

ಬಸವಪ್ಪ ಶಾಸ್ತ್ರಿಗಳು ೧೮೪೩ರಲ್ಲಿ ಜನಿಸಿದರು. ಅಂದಿನ ರಾಜಧಾನಿಯಾಗಿದ್ದ ಮೈಸೂರಿನಲ್ಲಿ ಜನ್ಮತಾಳಿದರು. ವಿದ್ವಾನ್ ಮಹದೇವ ಶಾಸ್ತ್ರಿಗಳೇ ಇವರ ತಂದೆ ಬಸವಮ್ಮನವರೆ ಇವರ ತಾಯಿ. ಶಾಸ್ತ್ರಿಗಳು ಸರಸ್ವತಿ ಆವಾಸ ಸ್ಥಾನವಾಗಿದ್ದಂತಹ ಮನೆತನದಲ್ಲೇ ಜನಿಸಿದರು. ಶಾಸ್ತ್ರಿಗಳ ತಂದೆ ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರೀತಿಗೆ ಪಾತ್ರರಾಗಿ ಅರಮನೆಯ ಪುರೋಹಿತರಾಗಿದ್ದರು. ಇವರ ತಾತ ಮುರುಡು ಬಸವಪ್ಪ ಸ್ವಾಮಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ನಾರಸಂದ್ರ ದಲ್ಲಿನ ರುದ್ರಾಕ್ಷಿಮಠದ ಅಧಿಪತಿಗಳಾಗಿದ್ದರು. ಶಾಸ್ತ್ರಿಗಳಿಗೆ ಅನುವಂಶೀಯ ಪ್ರಭಾವ ದೊರಕಿದ್ದರಿಂದ ಅರಮನೆಯಲ್ಲಿ ತಿರುಗಾಡುವ, ಗೋಷ್ಠಿಗಳಲ್ಲಿ ಭಾಗವಹಿಸುವ, ವಿದ್ವಾಂಸರನ್ನು ನೋಡುವ ಮಾತನಾಡುವಂತಹ ಸನ್ನಿವೇಶ ಒದಗಿಬಂತು. ಹೀಗಾಗಿ ಶಾಸ್ತ್ರಿಗಳ ಪ್ರತಿಭೆಗೆ ಪುಟವಿಟ್ಟಂತಾಯಿತು.

ಶಾಸ್ತ್ರಿಗಳಿಗೆ ಬಹುಬೇಗ ತಂದೆ-ತಾಯಿಂದಿರು ಅಗಲಿ ದೂರಾದರು. ಆಗ ಅವರು ಕಠಿಣಪರಿಸ್ಥಿತಿಗೆ ಒಳಗಾದರು. ಇಷ್ಟಾದರೂ ಅವರು ಗಮಕ ಕಲೆಯನ್ನು ಕರಗತ ಮಾಡಿಕೊಂಡಿದ್ದರು. ಇವರ ಗಾಯನವನ್ನು ಕೇಳಿದ ಮೈಸೂರಿನ ದೊರೆ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಮನಸೋತು ಹೋದರು. ಶಾಸ್ತ್ರಿಗಳಿಗೆ ಆಶ್ರಯವಿತ್ತು, ಅವರ ವಿಕಾಸಕ್ಕೆ ಅನುಕೂಲಕರವಾದ ಎಲ್ಲಾ ಅನುಕೂಲಗಳನ್ನು ಪೂರೈಸಿ ಅವರು ಪಾಂಡಿತ್ಯದ ಭಂಡಾರವಾಗಲು ಕಾರಣೀಭೂತರಾದರು.

ಮೈಸೂರು ಒಡೆಯರು ಸ್ವತಃ ಕವಿಗಳೂ, ಸಾಹಿತ್ಯ ಪೋಷಕರೂ ಆದ ಕಾರಣ ೧೯ ನೆಯ ಶತಮಾನವು ಕನ್ನಡ ಸಾಹಿತ್ಯ ಸೃಷ್ಠಿಯ ಪರ್ವಕಾಲವಾಯಿತು. ಗದ್ಯ-ಪದ್ಯ ನಾಟಕಗಳು ರೂಪುಗೊಂಡವು. ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿದವು. ಮೈಸೂರರಸರ ಕಲಾಭಿಮಾನವು ಗಮನಾರ್ಹವಾದ ಅಂಶವಾಗಿದೆ. ನಾಟಕ ತಂಡಗಳು ತಲೆಎತ್ತಿ 'ಕಾವ್ಯೇಷು ನಾಟಕಂ ರಮ್ಯಂ ಎಂಬ ಪ್ರಾಚೀನ ವಾಣಿಯನ್ನು ಸತ್ಯಸ್ಯ ಸತ್ಯ ಗೊಳಿಸಿದವು.

ಶಾಸ್ತ್ರಿಗಳು ಉದ್ದಾಮ ಪಂಡಿತರಾಗಿದ್ದರು. ಪ್ರಾಚೀನ ಪರಂಪರೆಯನ್ನು ಎಷ್ಟು ಚೆನ್ನಾಗಿ ತಿಳಿದಿದ್ದರೊ ಅರ್ವಾಚೀನ ಪರಂಪರೆಯನ್ನು ಕೂಡ ಅಷ್ಟೇ ಚೆನ್ನಾಗಿ ಅಧ್ಯಯನ ಮಾಡಿದ್ದರು. ಕನ್ನಡ ಸಾಹಿತ್ಯ ಪರಿವರ್ತನೆಗೊಳ್ಳುವ ಕಾಲದಲ್ಲಿ ಶಾಸ್ತ್ರಿಗಳು ಕಾಲಮಾನದೊಡನೆ ಚೆನ್ನಾಗಿ ಸ್ಪಂದಿಸಿದರು. ಆಶುಕವಿಗಳೂ, ಗಮಕಾರಾಧಕರೂ ಆದ ಇವರು ರಚನಾಕೌಶಲ್ಯದಲ್ಲೂ ಅದ್ವಿತೀಯವಾಗಿದ್ದರು. ಶಾಸ್ತ್ರ ಸಂಪತ್ತಿನೊಂದಿಗೆ ಕಲಾ ಸಂಪತ್ತನ್ನೂ ಸಹ ಅರ್ಜಿಸಿದ್ದರು. ಸಂಸ್ಕೃತ ಇಂಗ್ಲೀಷ್ ಆಧರಿಸಿ ಹನ್ನೊಂದು ಭಾಷಾಂತರ ಕೃತಿಗಳನ್ನು ನೀಡಿದ್ದಾರೆ. ಶಾಕುಂತಲಾ, ವಿಕ್ರಮೋರ್ವಶೀಯ, ಉತ್ತರ ರಾಮಚರಿತೆ, ಮಾಲತಿ ಮಾಧವ ರತ್ನಾವಳೀ, ಚಂಡಕೌಶಿಕ, ಹರ್ಷಚರಿತ, ಶೂರಸೇನಚರಿತೆ ಮುಂತಾದವು ಬಹು ಮುಖ್ಯವಾದವು. ಕಾಳಿದಾಸ, ಭಾಸ, ಭವಭೂತಿ, ಶ್ರೀಹರ್ಷ, ಬಾಣ ಮುಂತಾದ ಮಹಾನ್ ಕವಿಗಳ ಕೃತಿಗಳನ್ನು ಕನ್ನಡೀಕರಿಸಿ ಶಾಸ್ತ್ರಿಗಳು ಪರಮೋಪಕಾರವೆಸಗಿದ್ದಾರೆ. ಷೇಕ್ಸ್‌ಪಿಯರನ ಒಥೆಲೊ ನಾಟಕವನ್ನು ಅನುವಾದಿಸಿದ ಕೀರ್ತಿಸಹ ಶಾಸ್ತ್ರಿಗಳದೇ ಆಗಿದೆ. ಇನ್ನು ಸಾವಿತ್ರಿಚರಿತ್ರೆ, ನೀತೀಸಾರ ಸಂಗ್ರಹ, ದಮಯಂತಿಸ್ವಯಂವರ, ರೇಣುಕ ವಿಜಯ ಮುಂತಾದ ಹದಿನೇಳು ಸ್ವತಂತ್ರ ಕೃತಿಗಳನ್ನು ಕನ್ನಡ-ಸಂಸ್ಕೃತದಲ್ಲಿ ಬರೆದಿದ್ದಾರೆ.

ಬಸವಪ್ಪ ಶಾಸ್ತ್ರಿಗಳ ಅನುವಾದ ಕಲೆಗೆ ರನ್ನಗನ್ನಡಿ ಹಿಡಿವ ಕೃತಿಯೆಂದರೆ 'ಶಾಕುನ್ತಲಾ ನಾಟಕ. ಶಾಸ್ತ್ರಿಗಳ ಅಸಾಧಾರಣ ಪ್ರತಿಭೆ ನಮ್ಮನ್ನು ಚಕಿತರನ್ನಾಗಿಸುತ್ತದೆ. ಅಭಿನವ ಕಾಳಿದಾಸ ಬಿರುದು ನೀಡಿರುವುದು ಸಾರ್ಥಕ ಎಂದುಪ್ರಮಾಣಿಕರಿಸುತ್ತದೆ. ರಂಗ ಭೂಮಿಯ ಆದ್ಯನಾಟಕ ಕಾರರೆಂದರೆ ಶಾಸ್ತ್ರಿಗಳೇ ಎಂದು ಅಭಿಮಾನದಿಂದ ಹೇಳಬೇಕು. ಶಾಸ್ತ್ರಿಗಳಿಗೆ ಇಂಗ್ಲಿಷ್‌ನ ಗ್ರಂಥ ಆಳವಾಗಿ ಅರಿವಿಲ್ಲಿಲ್ಲ. ಓದಿಸಿ ಕೇಳಿ ಮನನ ಮಾಡಿ ಶೂರಸೇನ ಚರಿತ್ರೆ ಬರೆದರೆಂಬುದು ಅವರ ಸಮೀಪವಿದ್ದವರ ಅಂಬೋಣ. ಏನೇ ಆಗಲಿ ಆಂಗ್ಲ ಸಾಹಿತ್ಯವನ್ನು ಕನ್ನಡೀಕರಿಸಿದ ಕೀರ್ತಿ ಮಾತ್ರ ಶಾಸ್ತ್ರಿಗಳವರದು.

ಕನ್ನಡ ಸಾರಸ್ವತ ಲೋಕಕ್ಕೆ ಶಕ್ತಿಮೀರಿ ಸೇವೆ ಸಂದಾಯ ಮಾಡಿದ ಬಸವಪ್ಪ ಶಾಸ್ತ್ರಿಗಳು ಜೀವಿಸಿದ್ದು ಕೇವಲ ೪೮ ವರ್ಷಗಳು ಮಾತ್ರ. ೧೮೯೧ರಲ್ಲಿ ಕುದುರೆ ಗಾಡಿಯಿಂದ ಬಿದ್ದು ಅಸುನೀಗಿದರು: ಶಾಸ್ತ್ರಿಗಳು ಕಳೆದ ಶತಮಾನದಲ್ಲಿ ನಾಟಕ ಸಾಹಿತ್ಯಕ್ಷೇತ್ರಕ್ಕೂ ನೀಡಿದ ಕೊಡುಗೆ ಮಾತ್ರ ಅದ್ವಿತೀಯವಾದುದು.



# ವಿಚಾರ ದೀಪಿಕೆ

ದೇವೇಂದ್ರಪ್ಪ. ಮ. ಬಡಿಗೇರ, (ನಿವೃತ್ತ ಶಿಕ್ಷಕರು,)
ಆಯುರ್ವೇದ ಉಚಿತ ಚಿಕಿತ್ಸಕರು, ಗೋಕುಲ, ಹುಬ್ಬಳ್ಳಿ.

ಹೊಲಬನರಿಯದ ಗುರುವು, ಸುಲಭ
ನಲ್ಲದೆ ಶಿಷ್ಯ, ಕೆಲಬಲನ ನೋಡಿ
ವಿಚಾರಿಸಿ ಮಾಡದುಪದೇಶ,
ಅಂಧಕನ ಕೈಯ ಅಂಧಕ ಹಿಡಿದಂತೆ ಕಾಣಾರಾಮನಾಥ

ಯಾವ ಜಾತಿಯವನೇ ಆಗಲಿ ಉಪದೇಶ ಮಾಡತಕ್ಕ ಗುರುವು ತಾನು ಜ್ಞಾನಿಯಾಗಿರತಕ್ಕದ್ದು. ಮತ್ತು ಉಪದೇಶವನ್ನು ಪಡೆಯತಕ್ಕ ಶಿಷ್ಯನಾದರೂ ತಿಳಿದುಕೊಳ್ಳಲು ಸಮರ್ಥನಾಗಿರಬೇಕು. ಹೀಗೆ ಇಲ್ಲದ ಗುರು ಶಿಷ್ಯರಿದ್ದರೆ ಒಬ್ಬ ಕುರುಡನು ಇನ್ನೊಬ್ಬ ಕುರುಡನಿಗೆ ಒಂದು ಗ್ರಾಮಕ್ಕೆ ಹೋಗಲು ಮಾರ್ಗವನ್ನು ತೋರಿಸಿದಂತಾಗುವಷ್ಟೇ ಸರಿ. ಗುರುವಾದವನು ಮೊದಲು ದೇವರಿಂದ ಅಪ್ಪಣೆಯ ಸ್ಫೂರ್ತಿಯನ್ನು ಪಡೆಯಬೇಕು. ಎಲ್ಲಿಯವರೆಗೆ ಉಪದೇಶಮಾಡತಕ್ಕವನಿಗೆ ದೇವರ ಸ್ಫೂರ್ತಿಯ ಚಿನ್ಹೆ ಇಲ್ಲವೋ ಅಲ್ಲಿಯವರೆಗೆ ತಾನು ಜೀವಂತವಿರುವತನಕ ಉಪದೇಶವನ್ನು ಮಾಡಬಹುದು. ಆದರೆ ಇದರಿಂದ ಪ್ರಯೋಜನವಿಲ್ಲ. ವ್ಯರ್ಥವಾಗಿ ತನ್ನ ಶಕ್ತಿಯನ್ನು ಕಡಿಮೆ ಮಾಡಿಕೊಳ್ಳುವನು. ಗುರುವು ಉಪದೇಶಮಾಡಿದ ಕೂಡಲೇ ಮನಸ್ಸಿನಲ್ಲಿರುವ ವಿಷಯಲೋಲುಪತೆಗಳು ಹೊರಟುಹೋಗತಕ್ಕದ್ದು ಅಲ್ಲದೆ ಪೂರ್ವಜನ್ಮದ ದುಷ್ಟ ಸಂಸ್ಕಾರಗಳು ಸಹ ಮಾಯವಾಗಬೇಕು. ಉರಿಯುವ ಜ್ವಾಲೆಯು ಹಸಿ ಕಟ್ಟಿಗೆಗಳನ್ನು ಹಾಕಿದಕೊಡಲೆ. ಸುಟ್ಟು ಭಸ್ಮಮಾಡುವಂತೆ ಗುರುವಾದವನು ತನ್ನ ಭಕ್ತನನ್ನು ಅನುಗ್ರಹಿಸಿದರೆ ಅಥವಾ ಸ್ಪರ್ಶಿಸಿದರೆ ಅವನಲ್ಲಿಯ ಪಾಪದ ರಾಶಿಗಳು ನಾಶವಾಗತಕ್ಕದ್ದು. ಅಂದರೆ ಅವನು ನಿಜವಾದ ಗುರುವು. ಈ ಪ್ರೀತಿ ಎಂಬ ಕಡಲಿನಲ್ಲಿ. ಮುಳುಗುವುದಕ್ಕೆ ಯಾರಿಗಾದರೂ ಶಾಂತಿ ಇದೇ ಏನು? ಇಲ್ಲ. ಅಥವಾ ಆಶೆಯಾದರೂ ಇದೆಯೋ? ಇದು ಸಹ ಇಲ್ಲ. ಪ್ರಾಪಂಚಿಕ ವಸ್ತುಗಳ ಮೇಲೆ ವಿವೇಗ, ವೈರಾಗ್ಯ 'ಮತ್ತು ಸಾಧನ ಇವುಗಳ ಮೇಲೆಯೂ ಕೂಡ ಇಚ್ಛೆ ಇಲ್ಲ. ಆದರೆ ಎಲ್ಲಿಯೋ ನಾಲ್ಕಕ್ಷರಗಳನ್ನು ಕಲಿತುಕೊಂಡು ಈಗಿನ ಕಾಲದಲ್ಲಿ ಎಲ್ಲರೂ ಉಪದೇಶ ಮಾಡುವರು. ಬೇರೊಬ್ಬರಿಗೆ ಉಪದೇಶ ಮಾಡುವುದು ಅತಿ ಕಷ್ಟದ ಕೆಲಸ.

ಪರಶಿವನನ್ನು ಸಾಕ್ಷಾತ್ಕಾರ ಮಾಡಿಕೊಂಡ ನಂತರ ಯಾರು ಆತನಿಂದ ಅಪ್ಪಣೆಯನ್ನು ಪಡೆಯುವರೋ ಅವರುಮಾತ್ರ ಎರಡನೆಯವರಿಗೆ ಬೋಧಿಸಲಿಕ್ಕೆ ಯೋಗ್ಯರು. ಈಗಿನ ಕಾಲದ ಅಲ್ಪ ಪಾಂಡಿತ್ಯ ಉಳ್ಳ ಯಾವನು ದೊಡ್ಡ ಪಂಡಿತನಂತೆ ಮತ್ತು ತಪಸ್ವಿಯಂತೆ ಬೋಧನೆ ಮಾಡಲಿಕ್ಕೆ ಹೋದರೆ ಕೇವಲ ತನಗೆ ಮಾತ್ರ ಆಗುವಷ್ಟು ಅನ್ನವಿದ್ದವನು ನೂರು ಜನರನ್ನು ಭೋಜನಕ್ಕೆ ಕರೆದಂತೆ ಆಗುವುದು. ಆದ ಪ್ರಯುಕ್ತ ಮೊದಲು ತಾನು ಸಂಪೂರ್ಣಪಾಂಡಿತ್ಯವನ್ನು ಸಂಪಾದಿಸಿ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಅನಂತರ ಉಪದೇಶ ಮಾಡಬಹುದು. ಅದಕ್ಕೂ ಮೊದಲು ಬರುವುದಿಲ್ಲ. ಮೊದಲು ತಾನು ಅದನ್ನು ಸಾಧಿಸಿರಬೇಕು. ಏಕೆಂದರೆ ತಾನು ಯಾವುದೋ ಒಂದು ಕೆಟ್ಟಕೆಲಸವನ್ನು ಮಾಡುತ್ತಿದ್ದು, ಎರಡನೆಯವರಿಗೆ ಮಾಡಬಾರದೆಂದು ಹೇಳಿದರೆ ಅವರು ಬಿಡಲಿಕ್ಕೆ ಸಾಧ್ಯವೇ ಇಲ್ಲ. ತಾನು ಮೊದಲು ಸದಾ-ಚಾರ ಸದ್ವರ್ತನೆಯಿಂದ ನಡೆದರೆ, ಬೇರೆಯವರಿಗೆ ಹೀಗೆ ನಡೆಯಿರಿ ಎಂದು ಹೇಳಲು ಆವಶ್ಯವೇ ಬೀಳುವುದಿಲ್ಲ. ಇವರು ಅವರನ್ನು ನೋಡಿ ಓಹೋ! ಇವರು ಇಷ್ಟು ನಿಯಮಾಚಾರಗಳಿಂದ ಜೀವನ ಸಾಗಿಸ ಬೇಕಾದರೆ ಇದರಲ್ಲಿ ಏನೋ ಮಹತ್ತರವಾದ ಫಲವು ದೊರಕುವಂತೆ ಕಾಣುವುದು. ಅದಕ್ಕೋಸ್ಕರವಾಗಿಯೇ ಇವರು ನೇಮಗಳನ್ನು ಪಾಲಿಸುವರೆಂದು ತಿಳಿದು ಅವರೂಸಹ ಇದರಂತೆಯೇ ನಡೆದುಕೊಳ್ಳಲು ಪ್ರಾರಂಭಿಸುವರು.

ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಿ ಇರುವವರಿಗೆ ಬ್ರಹ್ಮದೇವರು ಸತ್ಯ-ಅಸತ್ಯ ಹೀಗೆ ಇವೆಲ್ಲವುಗಳನ್ನು ವಿಚಾರ ಮಾಡಿದರೆ ಏನೂ ಪ್ರಯೋಜನವಿಲ್ಲ. ದೇವಾಲಯದಲ್ಲಿ ದೇವರಿಲ್ಲದೆ ಕರ್ಪೂರ ಬೆಳಗಿ, ಶಂಖ ಊದಿದಂತಾಗುವುದು. ಆದಕಾರಣ ಬೋಧನೆ ಮಾಡತಕ್ಕವನು ಮೊದಲು ಬ್ರಹ್ಮಚರ್ಯ, ತಪಸ್ಸು, ಯೋಗಾಭ್ಯಾಸ ಇತ್ಯಾದಿಗಳನ್ನುಮಾಡಿ ಜ್ಞಾನವನ್ನು ಪಡೆಯಬೇಕು. ಪರಶಿವನನ್ನು ಸರ್ವದಾ ಧ್ಯಾನ ಮಾಡುತ್ತಿರುವುದೇ ಸರಿಯಾದ ಜ್ಞಾನ. ಈ ರೀತಿಯಾದ ಜ್ಞಾನವೇ ಜ್ಞಾನಯೋಗವೆಂದು ಅನೇಕ ಗ್ರಂಥಗಳಿಂದ ತಿಳಿದು ಬಂದಿದೆ.

ಜ್ಞಾನಯೋಗವೆಂದರೆ ಜ್ಞಾನದ ಮೂಲಕ ಪರಶಿವನೊಂದಿಗೆ ಸಂಬಂಧವನ್ನು ಕಲ್ಪಿಸಿ ಅಸತ್ಯವನ್ನು ತೊರೆದು ಕೊನೆಗೆ ನಿತ್ಯ ಅನಿತ್ಯ ವಸ್ತುಗಳ ವಿಚಾರವು ಗೆಲ್ಲುವವರೆಗೂ ಹೋಗಿ ಕಳ್ಳನಂತೆ ಸಮಾಧಿಯಲ್ಲಿ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳುವನು. ಹೇಗೆಂದರೆ ಚೋರನು ಯಾವದುಡಿತವಿಲ್ಲದೆ ಅನಾಯಾಸವಾಗಿ ದ್ರವ್ಯವನ್ನು ಸಂಗ್ರಹಿಸಿ ಸುಖವನ್ನು ಅನುಭವಿಸಬೇಕೆನ್ನುವನು. ಅದಕ್ಕೆ ಅವನು ಸರಿಯಾದ ಶ್ರೀಮಂತರ ಬಂಗ್ಲೆಯನ್ನು ನೋಡಿ ಕನ್ನಾಹಾಕಿ-ಒಳಗೆ ಹೋಗುವನು ಆದರೆ ಒಳಗೆ ಕತ್ತಲೆಯಿರುವುದರಿಂದ ಹಣದ ಪೆಟ್ಟಿಗೆ ಶೀಘ್ರವಾಗಿ ಸಿಗುವುದಿಲ್ಲ. ಅದಕ್ಕೆ ಅವನು ಕತ್ತಲೆಯಲ್ಲಿಯೇ ಕೈಯಾಡಿಸುತ್ತ ಹುಡುಕಲಿಕ್ಕೆ ಹತ್ತುವನು. ಹುಡುಕುವಕಾಲಕ್ಕೆ ಯಾವುದಾದರೊಂದು ಮರವೊ ಬುಟ್ಟಿಯೊ ಕೈಗೆ ಸಿಗುವದು



ಅದನ್ನು ಕೈಯಾಡಿಸಿ ನೋಡಿ ಇದು ಹಣದ ಪೆಟ್ಟಿಗೆ ಅಲ್ಲವೆಂದು ತಿಳಿದು ಮುಂದೆ ಹೋಗುವನು. ಅನಂತರ ಒಂದು ಖಾಲಿ ಚೀಲ ಚಿಮಣಿ ಡಬ್ಬಿ ಕೈಗೆ ಸಿಕ್ಕರೆ ಓಹೋ! ಇದೂ ಅಲ್ಲವೆನ್ನುವನು. ಹೀಗೆ ಎಲ್ಲಾ ವಸ್ತುಗಳನ್ನು ಮುಟ್ಟುತ್ತಾ ಮುಟ್ಟುತ್ತಾ ಇದೂ ಅಲ್ಲ ಆದೂ ಅಲ್ಲ ಎಂದು ದ್ರವ್ಯದ ಪೆಟ್ಟಿಗೆ ದೊರೆಯುವವರೆಗೂ ಹುಡುಕುತ್ತಾ ಬೇರೆ ಮನೆಗೆ ಹೋಗುವನು ಅಲ್ಲಿ ಹುಡುಕಿದನಂತರ ಒಂದು ಭದ್ರವಾದ ಪೆಟ್ಟಿಗೆ ಕೈಗೆ ಹತ್ತುವದು. ಅದನ್ನು ತುಂಬಾ ಕೈಯಾಡಿಸಿ, ಅಲುಗಾಡಿಸಿ, ಇದೇ ಹಣದ ಪೆಟ್ಟಿಗೆ ಎಂದು ನಿಶ್ಚಯಿಸಿ ಪುನಃ ಮುಂದಕ್ಕೆ ಹುಡುಕದೆ. ಅದನ್ನು ತೆಗೆದುಕೊಂಡು ಮನೆಗೆ ಹೋಗುವನು. ಇದರಂತೆ ದೇವರನ್ನು ಪಡೆಯುವದೆಂದು ತಿಳಿಯಬೇಕು.

ಜ್ಞಾನವೂ ಕೂಡಾ ಮೂರು ವಿಧವಾಗಿದೆ ಎಂದು ಹೇಳಬಹುದು. ಯಾಕೆಂದರೆ ಧ್ಯಾನದಿಂದ ಗೋಚರಿಸುವ ಜ್ಞಾನವೇ ಬೇರೆ. ಮತ್ತು ತರ್ಕದಿಂದ ದೊರೆಯುವ ಜ್ಞಾನವೇ ಬೇರೆ ಅಲ್ಲದೆ ಇದಕ್ಕಿಂತಲೂ ಸಾಧಕನಿಗೆ ಸತ್ಯ ಸಾಕ್ಷಾತ್ಕಾರವಾದ ಮೇಲೆ ದೊರಕುವ ಜ್ಞಾನವೇ ಬೇರೆ ಎಂದು ತಿಳಿಯಬಹುದು. ಮತ್ತು ಎಲ್ಲಿಯ ತನಕ ಸಾಧಕನಿಗೆ ದೇವರು ದೂರದಲ್ಲಿರುನೆಂದು ಭಾಸವಾಗುವದೋ ಅಲ್ಲಿಯ ವರೆಗೂ ಇನ್ನೂ ಅಜ್ಞಾನವೇ ಇರುವದೆಂದು ಗುರುತಾಗುವುದು ಆದರೆ ದೇವರನ್ನೂ ನಮ್ಮ ಅಂತರಂಗದಲ್ಲಿಯೇ ನೋಡಿದರೆ ಆಗ ನಿಜವಾದ ಜ್ಞಾನವಾಗುವುದು.

— ಮುಂದ ವರೆಯುವದು

## ವಿಮಾನಗಳಿಗೆ ಗಂಡಾಂತರವೊಡ್ಡುವ ಈ ಹಕ್ಕಿಗಳು

ಬಿ. ಸುಬ್ರಾಯ ಅಡಿಗರು, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ.

ಕೋಟ್ಯಾಂತರ ವರ್ಷಗಳ ಹಿಂದೆ ನಮ್ಮ ಭೂಮಿಯ ಮೇಲೆ ಜೀವನ ಆರಂಭವಾದಂದಿನಿಂದ ಆಕಾಶದಲ್ಲಿ ಪಕ್ಷಿಗಳ ಅಧಿಕಾರವೇ ನಡೆಯುತ್ತಿತ್ತು. ಆದರೆ ಈ ಶತಮಾನದ ಆರಂಭದಲ್ಲಿ ಮನುಷ್ಯ ವಿಮಾನವನ್ನು ಆವಿಷ್ಕರಿಸಿ ಪಕ್ಷಿಗಳ ಸಾಮ್ರಾಜ್ಯದಲ್ಲಿ ದರೋಡೆ ಮಾಡತೊಡಗಿದ. ಆಕಾಶದಲ್ಲಿ ವಿಮಾನಗಳ ಸಂಖ್ಯೆ ಹೆಚ್ಚುತ್ತ ಹೋದಂತೆ ಪಕ್ಷಿಗಳ ಆಕಾಶೀಯ ಸೀಮೆ ಕಡಿಮೆಯಾಗತೊಡಗಿತು. ಪರಿಣಾಮವಾಗಿ ಪಕ್ಷಿಗಳೊಡನೆ ಢಿಕ್ಕಿ ಅಥವಾ 'ಬರ್ಡ್ ಹಿಟ್' ಸಮಸ್ಯೆ ಹುಟ್ಟಿಕೊಂಡಿತು. ಮನುಷ್ಯ ಪಕ್ಷಿಯನ್ನು ಕಂಡೇ ವಿಮಾನ ನಿರ್ಮಾಣಕ್ಕೆ ತೊಡಗಿದ ಮತ್ತು ಹಾರಲು ಕಲಿತ. ಆ ಬಳಿಕ ಈ ಪಕ್ಷಿಗಳ ಪ್ರಾಕೃತಿಕ ಅಧಿಕಾರವನ್ನು ಕಸಿದುಕೊಂಡು ಅವನ್ನು ಆಕಾಶದ ಮೇರೆಯಿಂದಲೇ ದೂರಕ್ಕೋಡಿಸಲು ಯತ್ನಿಸತೊಡಗಿದುದು ಅನ್ಯಾಯದ ಪರಮಾವಧಿಯಲ್ಲವೆ. !

ಆ ವಿಚಾರ ಹೇಗಿದ್ದರೂ ಪಕ್ಷಿಗಳ ಢಿಕ್ಕಿಯಿಂದ ವಿಮಾನಗಳಿಗೆ ಹೆಚ್ಚಾಗಿ ಹಾನಿಯಾಗುತ್ತಿದೆಯೆಂಬುದು ನಿಜ. ಪಕ್ಷಿಗಳ ಡಿಕ್ಕಿಯಿಂದ ಲಕ್ಷಾಂತರರೂಪಾಯಿ ಬೆಲೆಯ ವಿಮಾನಗಳು ನಾಶವಾದುದಷ್ಟೇ ಅಲ್ಲ-ಎಷ್ಟೋ ನಿರ್ದೋಷ ವ್ಯಕ್ತಿಗಳು ಸಾವಿಗೀಡಾದುದೂ ಇದೆ. ಢಿಕ್ಕಿ ಹೊಡೆದ ಹಕ್ಕಿಗಳು ಹೇಗೂ ಸಾಯುತ್ತವೆ. ಇಂಥ ವಿಮಾನಾಪಘಾತದ ಕೆಲ ಘಟನೆಗಳನ್ನು ಇಲ್ಲಿ ಕೊಡಲಾಗದೆ.

1960ರಲ್ಲಿ ಈಸ್ಟರ್ನ್ ಏರ್‌ಲೈನ್ಸ್‌ನ 'ಲಾಕ್‌ಹೀಡ್ ಎಲೆಕ್ಟ್ರಾ' ವಿಮಾನವು ಬೋಸ್ಟನ್ (ಸಂಯುಕ್ತ ರಾಜ್ಯ ಅಮೆರಿಕಾ)ದಿಂದ ಹೊರಟಾಗ ಸ್ಟರ್ಲಿಂಗ್ ಎಂಬಹಕ್ಕಿಗಳ ಗುಂಪಿಗೆ ಢಿಕ್ಕಿ ಹೊಡೆದು ಅಪಘಾತಕ್ಕೀಡಾಯಿತು. ಅದರಲ್ಲಿದ್ದ 72ಪ್ರವಾಸಿಗಳಲ್ಲಿ 62ಮಂದಿ ಸತ್ತುಹೋದರು. ಎರಡು ವರ್ಷಗಳ ಬಳಿಕ ಯುನೈಟೆಡ್ ಏರ್‌ಲೈನ್ಸ್‌ನ ಒಂದು ವೈಕೌಂಟ್ ವಿಮಾನ ಅಮೇರಿಕೆಯಲ್ಲಿ ಹಂಸಗಳ ಗುಂಪಿಗೆಢಿಕ್ಕಿ ಹೊಡೆದು ನಾಶವಾಯಿತು. ಅದರಲ್ಲಿದ್ದ 17 ಜನರು ಸಾವಿಗೀಡಾದರು.

ಸಂಯುಕ್ತ ರಾಜ್ಯ ಅಮೇರಿಕೆಯ ಅಟ್ಲಾಂಟ ವಿಮಾನ ನಿಲ್ದಾಣದಲ್ಲಿ ಒಮ್ಮೆ ಲಿಯರ್ ಜೆಟ್ ಎಂಬ ಪುಟ್ಟ ವಿಮಾನವೊಂದು ಹಾರಾಟದ ವೇಳೆ ಕಾಬರ್ಡ್ಸ್ ಎಂಬ ಹಕ್ಕಿಗಳ ಗುಂಪಿಗೆ ಢಿಕ್ಕಿಹೊಡೆಯಿತು. ಈ ಅಪಘಾತದಲ್ಲಿ ಅದರಲ್ಲಿದ್ದ ಏಳು ಮಂದಿ ಪ್ರವಾಸಿಗರು ವಿಮಾನದ ಎಲ್ಲ ಕೆಲಸಗಾರರೂ ಮೃತರಾದರು. ಅದಲ್ಲದೆ ಉರಿಯುವ ವಿಮಾನ ನಿಲ್ದಾಣದ ಹೊರಗೆ ಒಂದು ಮನೆ, ನಾಲ್ಕು ಮೋಟಾರ್‌ಗಾಡಿ ಹಾಗೂ ಒಬ್ಬ ಮನುಷ್ಯನನ್ನು ಸುಟ್ಟು ಬೂದಿಮಾಡಿತು. ಪರಿಶೀಲನೆಯ ವೇಳೆ ಆ ಜಾಗದಲ್ಲಿ 15 ಕಾಬರ್ಡ್ಸ್ ಹಕ್ಕಿಗಳ ಹೆಣಗಳೂ ಸಿಕ್ಕಿದವು.



### ಭಾರತದಲ್ಲಿ

ನಮ್ಮ ದೇಶದಲ್ಲೂ ಹಕ್ಕಿಗಳ ಢಿಕ್ಕಿಯ ಹಲವಾರು ಘಟನೆಗಳು ನಡೆದಿವೆ. ಅವುಗಳಿಂದ ಹಲವರು ಸಾವಿಗೀಡಾಗಿದ್ದಾರೆ. ಮತ್ತು ಕೋಟ್ಯಾಂತರ ರೂಪಾಯಿ ಬೆಲೆಯ ಸಾಮುಗ್ರಿಗಳು ನಾಶವಾಗಿವೆ. 1962 ರಲ್ಲಿ ಲಾಹೋರಿನ ಬಳಿ ಒಂದು ಭಾರತೀಯ ಡಕೋಟಾ ವಿಮಾನಕ್ಕೆ ಒಂದು ರಣಹದ್ದು ಢಿಕ್ಕಿ ಹೊಡೆಯಿತು. ಮತ್ತು ವಿಮಾನದ ಕಾಕ್‌ಪೀಟ್‌ದ ಗಾಜುಒಡೆದು ಸಹಚಾಲಕನ ಮೋರೆಗೆ ಹೋಗಿ ಬಡಿಯಿತು. ಸಹಚಾಲಕನ ಮುಖ ರಕ್ತಮಯವಾಯಿತು. ಆತ ಎಚ್ಚರದಪ್ಪಿದ. ಆದರೆ ವಿಮಾನದ ಚಾಲಕ ಧೈರ್ಯಗೆಡದೆ ವಿಮಾನವನ್ನು ಸುರಕ್ಷಿತವಾಗಿ ಲಾಹೋರ್ ವಿಮಾನನಿಲ್ದಾಣದಲ್ಲಿಳಿಸಿದ ಮುಂದೆ ಸಹಚಾಲಕ ಮರಣಹೊಂದಿದ.

ಇದೇ ರೀತಿ ಪಟ್ನಾದಲ್ಲಿ ನೇಪಾಲ್ ಏರ್‌ಲೈನ್ಸ್‌ದ ಒಂದು ಬೋಯಿಂಗ್-727 ವಿಮಾನ ಇಳಿಯುವ ವೇಳೆ ರಣಹದ್ದಿಗೆ ಢಿಕ್ಕಿ ಹೊಡೆಯಿತು. ಪರಿಣಾಮವಾಗಿ ಚಾಲಕರ ಕಿಟಕಿಯ ಗಾಜು ಒಡೆಯಿತು. ಅವರ ಮುಖಗಳು ಗಾಯಗೊಂಡವು. ಆದರೂ ಅವರು ವಿಮಾನದ ಮೇಲಿನ ಹತೋಟಿಕಳೆದು ಕೊಳ್ಳಲಿಲ್ಲ. ಪರಿಣಾಮವಾಗಿ ಅದರಲ್ಲಿದ್ದ ೧೧೮ಜನರೂ ಸುರಕ್ಷಿತವಾಗಿ ಉಳಿದುಕೊಂಡರು.

೧೨-೯-೯೮೧ರಂದು ದಿಲ್ಲಿಯ ಪಾಲಮ್ ವಿಮಾನ ನಿಲ್ದಾಣದಲ್ಲಿ ಏರ್‌ಇಂಡಿಯಾದ ಒಂದು ಜಂಬೋಜೆಟ್ ಕೆಳಗಿಳಿಯುವ ವೇಳೆ ಹಕ್ಕಿಗಳಗುಂಪಿಗೆ ಢಿಕ್ಕಿಹೊಡೆಯಿತು. ಪರಿಣಾಮವಾಗಿ ವಿಮಾನದ ಎಣ್ಣೆಟ್ಯಾಂಕಿ ಒಡೆಯಿತು. ಒಂದುಹಕ್ಕಿ ಇಂಜಿನ್ನಿನೊಳಗೆ ಪ್ರವೇಶಿಸಿದುದರಿಂದ ಇಂಜಿನ್ ನಿಂತು ಹೋಯಿತು. ಇದರಲ್ಲಿ ಜನಹಾನಿಯೇನೋ ಆಗಲಿಲ್ಲ. ಆದರೆವಿಮಾನದ ದುರಸ್ತಿಗಾಗಿ ೪೧ಲಕ್ಷ ರೂಪಾಯಿ ಖರ್ಚಾಯಿತು. ಅದೇ ರೀತಿ ಬೊಂಬಾಯಿಯಿಂದ ಬೆಂಗಳೂರಿಗೆ ಹೋಗುತ್ತಿದ್ದ ಇಂಡಿಯನ್ ಏರ್‌ಲೈನ್ಸ್‌ದ ಏರ್‌ಬಸ್ ವಿಮಾನದ ಬಲಇಂಜಿನ್‌ನೊಳಗೆ ಎರಡು ಹದ್ದುಗಳು ಹೋದವು. ಇದರಿಂದ ಇಂಜನ್ ಕೆಟ್ಟು ಹೋಯಿತು. ಚಾಲಕ ಕೇವಲ ಎಡ ಇಂಜಿನ್‌ನ ಸಹಾಯದಿಂದ ವಿಮಾನ ಅಪಘಾತಕ್ಕೀಡಾಗದಂತೆ ನೋಡಿಕೊಂಡ ವಿಮಾನ ದುರಸ್ತಿಗೆ 1.25 ಕೋಟಿ ರೂ ಖರ್ಚಾಯಿತು.

ಈ ಹಕ್ಕಿಗಳ ಢಿಕ್ಕಿ ಅದೆಷ್ಟು ಘಾತವಾದುದೆಂದು ಮೇಲಿನ ಉದಾಹರಣೆಗಳಿಂದಲೇ ನಾವು ಅರಿಯಬಹುದು. ಎಂತಲೇ ಹಕ್ಕಿಗಳ ಢಿಕ್ಕಿಯ ಸಮಸ್ಯೆ ಬಗೆಹರಿಸಲು ಇಡೀ ವಿಶ್ವ ಗಂಭೀರವಾಗಿ ಯೋಚಿಸುತ್ತಿದೆ.

## ಆಘಾತದ ಶಕ್ತಿ

ಇಂಥ ಪುಟ್ಟ ಹಕ್ಕಿ ಇಷ್ಟೊಂದು ದೊಡ್ಡ ವಿಮಾನಕ್ಕೆ ಇಂಥ ಭೀಕರ ಗಂಡಾಂತರವನ್ನು ಅದೆಂತು ಒಡ್ಡಬಲ್ಲುದು ? ಎಂಬ ಪ್ರಶ್ನೆ ಸಹಜವಾಗಿಯೆ ಮನದಲ್ಲೇಳುತ್ತದೆ. ಆ ಬಗ್ಗೆ ನೀವೆ ಒಂದಿಷ್ಟು ಯೋಚಿಸಿ ನೋಡಿ.-ಗಾಜಿನ ಗೋಡೆಗೆ ರಬ್ಬರಿನ ಚೆಂಡನ್ನು ಮೆಲ್ಲಗೆ ಬಡಿದರೆ ಗಾಜು ಬಹುಶಃ ಒಡೆಯಲಾರದು. ಆದರೆ ಅದೇ ಚೆಂಡನ್ನು ರಭಸವಾಗಿ ಎಸೆದಕ್ಕೆ ಗಾಜು ಒಡೆದೀತು. ಚೆಂಡಿನ ವೇಗವನ್ನು ಬಹಳಷ್ಟು ಹೆಚ್ಚಿಸಿದರೆ ದಪ್ಪನೆಯ ಗಾಜು ಒಡೆಯಬಲ್ಲುದು, ಚೆಂಡಿನ ರಭಸ ಹೆಚ್ಚಿದಂತೆ ಅದು ಘಾತಕವಾಗುತ್ತದೆ. ಒಂದು ಹಂತದಲ್ಲಿ ಈ ಚೆಂಡು ಗುಂಡಿನಷ್ಟೇ ಭಯಂಕರವಾಗುವುದು. ಆಗ ಗಾಜೇಕೆ ಇಟ್ಟಿಗೆಯ ಗೋಡೆಯೂ ಬಡೆದು ಹೋದೀತು ಬಂದೂಕಿನ ಗುಂಡು ಭಾರದಲಿ ಕೆಲಗ್ರಾಮ್‌ಗಳಿಷ್ಟಿದ್ದೀತು. ಅದು ತನ್ನ ತೀವ್ರ ಗತಿಯಿಂದಾಗಿಯೇ ಆನೆಯನ್ನು ಕೊಂದು ಹಾಕಬಲ್ಲುದು.

ಈ ಬಗ್ಗೆ ಇನ್ನೊಂದು ಉದಾಹರಣೆ ನೋಡಿರಿ ನಿಂತ ಕಾರಿನ ಗಾಜಿಗೆ ಮೆಲ್ಲನೆ ಕಲ್ಲು ಹೊಡೆದರೆ ಅದಕ್ಕೇನೂ ಆಗುವುದಿಲ್ಲ. ಆದರೆ ಆ ಕಾರು ವೇಗವಾಗಿ ಓಡುತ್ತಿದ್ದರೆ ಮೆಲ್ಲನೆ ಎಸೆದ ಕಲ್ಲೂ ಕಾರನ್ನು ಪುಡಿ ಪುಡಿ ಮಾಡಬಹುದು. ಈಗ ಆ ಕಲ್ಲನ್ನೇ ತೀವ್ರಗತಿಯಿಂದ ಹಾರುತ್ತಿರುವ ವಿಮಾನಕ್ಕೆ ಹೊಡೆದರೆ ವಿಮಾನದ ಆ ಭಾಗ ಖಂಡಿತ ಒಡೆದು ಹೋದೀತು ಈ ಸಿದ್ಧಾಂತದ ಪ್ರಕಾರ ತೀವ್ರಗತಿಯಿಂದ ಹಾರುತ್ತಿರುವ ವಿಮಾನಕ್ಕೆ ಹೊಡೆದರೆ ವಿಮಾನದ ಆ ಭಾಗ ಖಂಡಿತ ಒಡೆದು ಹೋದೀತು. ಈ ಸಿದ್ಧಾಂತದ ಪ್ರಕಾರ ತೀವ್ರಗತಿಯಿಂದ ಹಾರುತ್ತಿರುವ ವಿಮಾನಕ್ಕೆ ಒಂದು ಹಕ್ಕಿ ಡಿಕ್ಕಿ ಹೋಡೆಯಿತೆಂದರೆ, ಅದರ ಹೊಡೆತ ತೋಪಿನ ಗುಂಡಿನಂತೆ ಭಯಂಕರವಾಗುವುದು. ವಿಮಾನ ೧೫೦ ರಿಂದ ೫೦೦ ಮೀಟರ್‌ವರೆಗಿನ ಎತ್ತರದಲ್ಲಿ ತಾಸಿಗೆ ೭೨೦ ಕಿಲೋಮೀಟರ್ ವೇಗದಿಂದ ಹಾರುತ್ತಿದ್ದರೆ, ಅದಕ್ಕೆ ಒಂದು ಗುಬ್ಬಚ್ಚಿ ಬಡಿದರೂ ೧.೪ ಟನ್ (೧೪೦೦ ಕಿಲೋಗ್ರಾಮ್) ಶಕ್ತಿಯ ಆಘಾತ ತಗಲುವುದು. ಆ ವಿಮಾನಕ್ಕೆ ಸಾರಸ ಪಕ್ಷಿ ಢಿಕ್ಕಿ ಹೊಡೆಯಿತೆಂದರೆ ೩೨ ಟನ್ ಹಾಗೂ ವಿಶಾಲ ಹಂಸವೊಂದು ಢಿಕ್ಕಿ ಹೊಡೆದರೆ ೪೮ ಟನ್‌ದ ಆಘಾತ ಉಂಟಾವುದು.

ಇಂಥ ವಿಶಾಲ ಆಘಾತದಿಂದ ವಿಮಾನದ ಯಾವ ಭಾಗಕ್ಕೆ ಈ ಹಕಿ ಢಿಕ್ಕಿ ಹೊಡೆಯುವುದೋ, ಆ ಭಾಗ ಓರೆಯಾಗುವುದು. ಹಕ್ಕಿ ವಿಮಾನದ ಕಿಟಕಿಯ ಗಾಜಿಗೆ ಢಿಕ್ಕಿ ಹೊಡೆದರೆ ಗಾಜು ಸಾಕಷ್ಟು ಗಟ್ಟಿಯಾಗಿದ್ದರು ಒಡೆದು ಹೋಗುವುದು ಈ ಸ್ಥಿತಿ ತುಂಬಾ ದುಃಖದಾಯಕವಾದುದು. ಏಕೆಂದರೆ ಎಷ್ಟೋ ಸಲ ಗಾಜು ಒಡೆದು, ಹಕ್ಕಿಗಳು ಯಾನಕಕ್ಷೆಗೆ ನುಗ್ಗುತ್ತವೆ. ಪರಿಣಾಮವಾಗಿ ಚಾಲಕ ಮತ್ತು ಸಹಚಾಲಕನ ಮೋರೆಗೆ ಗಾಯವಾಗುತ್ತದೆ. ಇಷ್ಟೊಂದು ಗಾಯಗಳೊಂದಿಗೆ ವಿಮಾನದ ಮೇಲೆ ಹತೋಟಿಯಿರಿಸಲು ಅವರಿಗೆ ಕಷ್ಟವಾಗುತ್ತದೆ. ಒತ್ತಡದಲ್ಲಿ ವ್ಯತ್ಯಾಸವಾಗುವುದರಿಂದ ಎಷ್ಟೋಸಲ ಪ್ರವಾಸಿಗರು ಒತ್ತಡದಿಂದಾಗಿ ವಿಮಾನದ ಹೊರಗೆ ಸೆಳೆಯಲ್ಪಡುತ್ತಾರೆ. ಕೆಲವೊಮ್ಮೆ ಹಕ್ಕಿಗಳ ಢಿಕ್ಕಿಯಿಂದಾಗಿ ವಿಮಾನ ಹೊರಗಿರುವ ಯಂತ್ರಗಳಾಗಲೀ ನಿಯಂತ್ರಣದ ಉಪಕರಣಗಳಾಗಲೀ ಹಾನಿಗೀಡಾಗುತ್ತದೆ. ಇವರಿಂದಲೂ ವಿಮಾನ ಅಪಘಾತಕ್ಕೊಳಗಾಗುವುದು.

ಆದರೆ ವಿಮಾನದ ಇಂಜನಿಗೆ ಹಕ್ಕಿಗಳು ಢಿಕ್ಕಿಹೊಡೆದಾಗ ಬಹುದೊಡ್ಡ ಸಮಸ್ಯೆ ಎದುರಾಗುವುದು. ಹೆಚ್ಚಿನ ದುರ್ಘಟನೆಗಳು ಇಂಜಿನ್ ನಿಂತು ಹೋಗಿ ನಡೆಯುವುವು. ಜೆಟ್ ವಿಮಾನಗಳಲ್ಲಿ ಇದು ಸರ್ವಸಾಮಾನ್ಯ.

ಹಕ್ಕಿ ಇಂಜಿನ್‌ದೊಳಗೆ ಹೋದಾಗ ಇಂಜನಿನ ಬ್ಲೇಡ್ ಹಾಗೂ ಇತರ ಭಾಗಗಳು ಹಾನಿಗೊಳಗಾಗುವುವು. ಇಂಥ ಘಟನೆ ಸಂಭವಿಸಿದಾಗ ಇಂಜಿನ್ ತಾನಾಗಿಯೇ ನಿಲ್ಲುವುದು, ಅಥವಾ ಚಾಲಕ ಅದನ್ನು ನಿಲ್ಲಿಸಬೇಕಾಗುವುದು. ವಿಮಾನ ಹಾರುತ್ತಿರಲಿ-ಅಥವಾ ನೆಲಕ್ಕಿಳಿಯುವ ಸ್ಥಿತಿಯಲ್ಲಿರಲಿ ಭಯಂಕರ ಅಪಘಾತ ಸಂಭವಿಸುವುದು.

ಆಧುನಿಕ ಜೆಟ್ ವಿಮಾನಗಳಿಗೆ ಹಲವಾರು ರೆಕ್ಕೆಗಳಿರುತ್ತವೆ. ಅವು ರಭಸವಾಗಿ ತಿರುಗುತ್ತಿದ್ದು ವಾತಾವರಣದ ಗಾಳಿಯನ್ನು ಒಳಗೆಳೆದುಕೊಳ್ಳುತ್ತವೆ ಇವು ಟೇಬಲ್‌ಫ್ಯಾನ್‌ದ ರೆಕ್ಕೆಗಳಂತಿದ್ದು, ಇವುಗಳ ಹಲವಾರು ಸಾಲುಗಳು ಒಂದರ ಹಿಂದೊಂದರಂತೆ ಜೋಡಿಸಲ್ಪಟ್ಟಿವೆ. ದೊಡ್ಡ ವಿಮಾನ ಇಂಜನ್‌ಗಳ ಮುಖದ ವ್ಯಾಸ ಬಹಳಷ್ಟು ದೊಡ್ಡದಿದ್ದು, ಅವು ಸೆಳೆದುಕೊಳ್ಳುವ ಗಾಳಿಯವೇಗವೂ ತೀವ್ರವಾಗಿ ರುವುದು. ಉದಾಹರಣೆಗಾಗಿ ಏರ್‌ಬಸ್ ವಿಮಾನದ ಇಂಜನ್ನಿನ ಮುಖದ ವ್ಯಾಸ ೬ ಅಡಿಯಿದ್ದು ಈ ಇಂಜನ್ ಸೆಕೆಂಡಿಗೆ ಸುಮಾರು ೬೦೦ ಕಿಲೋಗ್ರಾಮ್‌ದಂತೆ ವಾಯುವನ್ನು ಒಳಗೆಳೆದುಕ್ಕೊಳ್ಳುವುದು. ಈ ರೀತಿ ವಿಮಾನ ನೆಲದ ಮೇಲಿದ್ದರೂ ಇಂಜನ್ ಕೆಲಸಮಾಡುತ್ತಿದ್ದರೆ, ಎದುರು ಬಂದ ಹಕ್ಕಿ ಸಹಜವಾಗಿಯೇ ಒಳ-ಗೆಳೆಯಲ್ಪಡುವುದು.

ಪಕ್ಷಿ ಇಂಜಿನ್ನಿನ ಒಳಗೆ ಸೇರಿದಾಗ, ಮೊದಲು ಮುಂದಿನ ಒಂದು ಅಥವಾ ಎರಡು ಸಾಲಿನ ಬ್ಲೇಡುಗಳಷ್ಟೆ ಹಾನಿಗೀಡಾಗುತ್ತವೆ. ಆ ಬಳಿಕ ಮುರಿದ ಈ ಬ್ಲೇಡುಗಳು ವೇಗವಾಗಿಸುತ್ತುತ್ತ ಇತರ ಬ್ಲೇಡುಗಳಿಗೆ ಢಿಕ್ಕಿಹೊಡೆದು ಅವನ್ನು ಹಾನಿ-ಗೊಳಪಡಿಸಿಸುತ್ತವೆ. ಕೊನೆಯ ಸಾಲಿಗೆ ಬರುವಷ್ಟರಲ್ಲಿ ಇಂಜಿನಿನ ಹಲವಾರು ಬ್ಲೇಡುಗಳು ನಾಶವಾಗುತ್ತವೆ. ಕೆಲವೊಮ್ಮೆ ಇಡೀ ಇಂಜಿನ್ ಸಬ್ಧವಾಗುತ್ತವೆ.

ವಾಯುಪಡೆಯ ವಿಮಾನಗಳ ಪಾಲಿಗೆ ಈ ಹಕ್ಕಿಗಳ ಢಿಕ್ಕಿ ತುಂಬ ಅಪಾಯಕಾರಿಯೋ. ಕಾರಣವೆಂದರೆ ಸೈನಿಕವಿಮಾನಗಳು ಅತಿ ಹೆಚ್ಚು ವೇಗ ಹಾಗೂ ಕಡಿಮೆ ಎತ್ತರದಲ್ಲಿ ಹಾರುತ್ತವೆ. ಇದರಿಂದ ಹಕ್ಕಿಗಳ ಢಿಕ್ಕಿ ಹೆಚ್ಚು ಹೆಚ್ಚಾಗಿ ಸಂಭವಿಸುತ್ತದೆ. ಇದಲ್ಲದೆ ವಿಮಾನದಲ್ಲಿ ಒಬ್ಬ ಮಾತ್ರ ಚಾಲಕ ಇರುವುದುಂಟು. ಆ ಚಾಲಕನೇ ಹಕ್ಕಿಯ ಢಿಕ್ಕಿಗೆ ಒಳಗಾಗಿ ಗಾಯಗೊಂಡರೆ ವಿಮಾನ ನಡೆಸಲು ಬೇರಾರು ಇರುವುದಿಲ್ಲ. ಇದೇ ರೀತಿ ಸೈನಿಕ ವಿಮಾನಗಳಲ್ಲಿ ಹೆಚ್ಚಾಗಿ ಒಂದು ಇಂಜಿನ್ ಇರುತ್ತದೆ. ಅಕಸ್ಮಾತ್ ಆ ಇಂಜಿನ್ ಹಕ್ಕಿಗಳ ಢಿಕ್ಕಿಯಿಂದ ಕೆಟ್ಟು ಹೋದರೆ ಚಾಲಕ ಅಸಹಾಯಕನಾಗುತ್ತಾನೆ.

೨೬-೧-೧೯೮೫ ರಂದು ಪ್ರಜಾತಂತ್ರ ಸಮಾರಂಭದ ಪರೇಡನ್ನು ದೂರದರ್ಶನದಲ್ಲಿ ವೀಕ್ಷಿಸುವ ವೇಳೆ, ಮೂರು ಜಾಗ್ವರ್ ವಿಮಾನಗಳ ಹಾರಾಟ ಪ್ರದರ್ಶಿಸಲಾಯಿತು ಅದೇ ವೇಳೆ ಆಕಾಶದಲ್ಲಿ ಕೆಲ ರಣಹದ್ದುಗಳೂ ಹಾರಾಡುತ್ತಿರುವುದು ಕಾಣಿಸಿತ್ತು. ತಕ್ಷಣ ಒಂದು ವಿಮಾನ ಹಿಂದಿರುಗಿತು, ಮತ್ತೆ ಹಾರಾಟ ಪ್ರದರ್ಶನವನ್ನು ರದ್ದು ಮಾಡಲಾಯಿತು. ಸೂಕ್ಷ್ಮವಾಗಿ ನೋಡುವವರಿಗೆ ಒಂದು ವಿಮಾನಕ್ಕೆ ಆ ವಿಮಾವಕ್ಕೆ ರಣಹದ್ದುಗಳು ಢಿಕ್ಕಿ ಹೊಡೆದುದೂ ಅದರಿಂದಾಗಿಯೇ ಆ ವಿಮಾನ ಮರಳಿದ್ದುದೂ ಕಂಡು ಬಂದಿತು. ಈ ಸಲ ಬಹುಶಃ ವಿಶ್ವದಲ್ಲೇ ಮೊದಲ ಬಾರಿ ಪಕ್ಷಿಗಳ ಢಿಕ್ಕಿಯನ್ನು ಇಷ್ಟೊಂದು ಹತ್ತಿರದಿಂದ ದೂರದರ್ಶನದಲ್ಲಿ ನೋಡುವ ಸೌಭಾಗ್ಯ ಜನತೆಗೆ ಲಭಿಸಿತ್ತು. ದುರ್ಭಾಗ್ಯದಿಂದ ಹೆಚ್ಚಿನವರಿಗೆ ಈ ಘಟನೆ ಅರ್ಥವಾಗಲಿಲ್ಲ.

## ನಿವಾರಣೋಪಾಯಗಳು

ಇಡೀ ವಿಶ್ವದಲ್ಲಿ ಪಕ್ಷಿ ಸಮಸ್ಯೆಯ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಇವುಗಳಿಂದ ಈ ಸಮಸ್ಯೆ ಪೂರ್ತಿಯಾಗಿ ಬಗೆ ಹರಿಯದಿದ್ದರೂ, ಒಂದಷ್ಟು ಕಡಿಮೆಯಾಗಲು ಸಾಧ್ಯ.

ಮೊದಲನೆಯ ಹಂತವಾಗಿ ವಿಮಾನನಿಲ್ದಾಣ ಹಾಗೂ ಸುತ್ತಮುತ್ತಲ ಪ್ರದೇಶವನ್ನು ಸ್ವಚ್ಛವಾಗಿರಿಸಬೇಕು. ಪಕ್ಷಿಗಳು ಮುಖ್ಯವಾಗಿ ಆಹಾರ ಹುಡುಕುತ್ತ ಅಲ್ಲಿಗೆ ಬರುತ್ತವೆ. ಆದ್ದರಿಂದ ಆಹಾರ ವಸ್ತುಗಳನ್ನು ಅಲ್ಲಿ ಒಯ್ಯದಂತೆ ಪ್ರತಿಬಂಧಿಸಲಾಗಿದೆ. ಮುಖ್ಯವಾಗಿ ಮಾಂಸದ ತುಣುಕುಗಳನ್ನು ಅಕ್ಕ ಪಕ್ಕದಲ್ಲಿ ಎಸೆಯಬಾರದು. ನಿಲ್ದಾಣದ ಒಳಗೂ ಹುಲ್ಲು ಹೆಚ್ಚು ಬೆಳೆಯಲು ಬಿಡುವುದಿಲ್ಲ. ನೀರಿನ ಹೊಂಡ, ಕೆರೆ ಯಾವುದೂ ಇರದಂತೆ ನೋಡಿ ಕೊಳ್ಳಲಾಗುತ್ತದೆ. ಇದರಿಂದ ಹುಳ ಹುಪ್ಪಡಿ, ಜೋಂಡಿಗ, ಮಿಡಿತೆ ನಳ್ಳಿ, ಇಲಿ, ಕಪ್ಪೆ ಮೊದಲಾದವು ಕಡಿಮೆಯಾಗುತ್ತವೆ. ಭಾರತೀಯ ವಿಮಾನ ನಿಯಮ ೧೯೩೭ರ ಪ್ರಕಾರ ಯಾವುದೇ ನಿಲ್ದಾಣದಲ್ಲಿ ೧೦ ಕಿ.ಮೀ ಒಳಗೆ ಪಶುವಧ ಸ್ಥಳ ನಿರ್ಮಿಸಲು ಅನುಮತಿ ಕೊಡಲಾಗುವುದಿಲ್ಲ; ಎಲುಬು ಅಥವಾ ಮಾಂಸದ ಅವಶೇಷಗಳನ್ನು ರಾಶಿ ಹಾಕುವಂತಿಲ್ಲ. ಹಕ್ಕಿಗಳ ಢಿಕ್ಕಿಯ ನಿವಾರಣೆಗಾಗಿಯೇ ಈ ಕ್ರಮ ಕೈಗೊಳ್ಳಲಾಗುತ್ತದೆ. ಎಂತಲೇ ಪ್ರಜಾತಂತ್ರ ಸಮಾರಂಭದ ಪರೇಡ್ ನೋಡ ಬರುವವರು ಆಹಾರ ಸಾಮಗ್ರಿಗಳನ್ನು ಒಳಗೊಯ್ಯುವಂತಿಲ್ಲ.

ವಲಸೆ ಹಕ್ಕಿಗಳ ಢಿಕ್ಕಿಯನ್ನು ತಪ್ಪಿಸಿಕೊಳ್ಳಲು ಈಹಕ್ಕಿಗಳು ಹಾರುವಮಾರ್ಗಗಳನ್ನು ಗುರುತಿಸಲಾಗುತ್ತದೆ. ಆ ಬಳಿಕ ವಿಮಾನದ ಹಾರಾಟ ಮಾರ್ಗವನ್ನೇ ಅಗತ್ಯಕ್ಕೆ ತಕ್ಕಂತೆ ಬದಲಾಯಿಸಲಾಗುತ್ತದೆ. ವಿಮಾನ ನಿಲ್ದಾಣದಲ್ಲಿ ಪಾರಿವಾಳ ಹಾಗೂ ಇತರ ಹಳ್ಳಗಳ ಗೂಡುಗಟ್ಟದಂತೆ ನೋಡಲಾಗುತ್ತದೆ. ಬಂದೂಕು, ಪಟಾಕಿ ಹಾಗೂ ಇತರ ಕೃತಕ ಉಪಾಯಗಳಿಂದ ಹಕ್ಕಿಗಳನ್ನು ದೂರಕ್ಕೋಡಿಸುವುದು, ಕೀಟನಾಶಕ ಔಷಧಿಗಳ ಸಿಂಪಡಿಕೆ, ಸತ್ತ ಹಕ್ಕಿಗಳ ಪ್ರದರ್ಶನ ಮೊದಲಾದವುಗಳಿಂದ ಹಕ್ಕಿಗಳನ್ನು ಓಡಿಸಲೆತ್ನಿಸಲಾಗುತ್ತದೆ. ಹಾರಾಟವನ್ನಾರಂಭಿಸುವಾಗ ಹಾಗೂವಿಮಾನವನ್ನು ನಿಲ್ದಾಣದಲ್ಲಿಳಿಸುವಾಗ ವಿಮಾನದ ದೀಪಗಳನುರಿಸಲಾಗುತ್ತದೆ. ಅದರಿಂದ ಹಕ್ಕಿಗಳು ದೂರ ಹೋಗುತ್ತವೆ. ಇಷ್ಟೆಲ್ಲ ಉಪಾಯ ಕೈಗೊಂಡರೂ ಪೂರ್ತಿ ಸಾಫಲ್ಯ ಸಿಗುತ್ತಿಲ್ಲ.

ತೀವ್ರಗತಿಯಿಂದ ಹಾರುವ ಹೊಸ ಹೊಸ ವಿಮಾನಗಳು ಅಸ್ತಿತ್ವಕ್ಕೆ ಬರುತ್ತಿರುವಾಗ, ದಿನದಿನಕ್ಕೆ ವಿಮಾನಗಳ ಸಂಖ್ಯೆ ಹೆಚ್ಚುತ್ತಿರುವಾಗ, ಹಕ್ಕಿಗಳ ಢಿಕ್ಕಿಯನ್ನು ತಡೆಯಲು ನಿರಂತರ ಶೋಧ ನಡೆಯಬೇಕಾಗಿದೆ. ಹೊಸ ಶೋಧನೆಗಳಿಂದ ಮಾತ್ರ ಪಕ್ಷಿಗಳ ಢಿಕ್ಕಿಯನ್ನು ಯಶಸ್ವಿಯಾಗಿ ಎದುರಿಸಬಹುದೇನೋ. !



# ಆಲೂಗಡ್ಡೆಗಾಗಿ ಯುದ್ಧ

ಪ. ರಾಮಕೃಷ್ಣ ಶಾಸ್ತ್ರಿಗಳು, ಶಿವಶಕ್ತಿ ನಿಲಯ, ಅಂಚೆ ಮಚ್ಚಿನ - 574295, ದ. ಕನ್ನಡ

ಆಹಾರವಾಗಿಯೂ ತರಕಾರಿಯಾಗಿಯೂ ಬಳಸಲ್ಪಡುತ್ತಿರುವ ಆಲೂಗಡ್ಡೆಯ ಇತಿಹಾಸವಂತೂ ವಿಚಿತ್ರವಾಗಿದೆ. ದಕ್ಷಿಣ ಅಮೇರಿಕದ ಚಿಲಿ ಅದರ ಮೂಲಸ್ಥಾನ. ೧೫೩೭ ರಲ್ಲಿ ಸ್ಪೇನಿನ ಸೈನಿಕರು ಎಂಡ್ರಿಸ್ ಪರ್ವತಗಳ ಬಳಿಯ ಕಾಡು ಜನರು ಅದನ್ನು ಸುಟ್ಟು ತಿನ್ನುತ್ತಿರುವುದು ಕಂಡು ರುಚಿ ನೋಡಿದರು. ಎಲಿಜಬೆತ್ ರಾಣಿಯ ಕಾಲದ ನಾವಿಕ ಡ್ರೇಕ್ ಅದನ್ನು ಯುರೋಪಿಗೆ ಪರಿಚಯಿಸಿದ. ಅದಕ್ಕಾಗಿ ಆಫೆನ್‌ಬರ್ಗ್‌ನಲ್ಲಿ ಅವನಿಗೆ ಸ್ಮಾರಕವೊಂದನ್ನು ನಿರ್ಮಿಸಿ, ಅವನ ಶಿಲಾವಿಗ್ರಹವನ್ನು ನೆಟ್ಟು 'ಯೂರೋಪಿನಲ್ಲಿ ಬಟಾಟೆಯ ಪ್ರಚಾರಕ' ಎಂದು ಬರೆಯಲಾಗಿದೆ.

೧೫೭೦ ರಲ್ಲಿ ಆಲೂಗಡ್ಡೆ ಸ್ಪೇನಿಗೆ ಬಂದಾಗ ಉದ್ಯಾನವನಗಳಲ್ಲಿ ಚೆಲುವಿಗಾಗಿ ಅದನ್ನು ಬೆಳೆಯುತ್ತಿದ್ದರು, ಅದನ್ನು ತಿನ್ನಬಹುದೆಂದು ಗೊತ್ತಿರಲಿಲ್ಲ. ಸರ್‌ವಾಲ್ಟರ್ ಶೀಲೆಗೆ ಅಮೇರಿಕನ್ ಸೇಬಿನಗಿಡ ಎಂದು ಆಲೂಗಡ್ಡೆಗಿಡವನ್ನು ಯಾರೋ ನೀಡಿದರು. ಬಹುಕಾಲ ಸಾಕಿದರೂ ಅದರಲ್ಲಿ ಸೇಬು ಬಿಡದಿರುವುದು ನೋಡಿ ಅದನ್ನು ಆತ ಬೇರುಸಹಿತ ಕಿತ್ತೆಸೆಯಲು ಆಜ್ಞಾಪಿಸಿದಾಗ ಮಣ್ಣಿನೊಳಗಿದ್ದ ಆಲೂಗಡ್ಡೆಯನ್ನು ನೋಡಿ ಆಶ್ಚರ್ಯಗೊಂಡ. ಆಲೂಗಡ್ಡೆಯ ಎಲೆಗಳು ಸಲಾಡ್‌ಗೆ ಯೋಗ್ಯವಿದೆಯೆಂದು ಅರಿತು ಶೀಲೆ ಅದನ್ನು ವಿಕ್ಟೋರಿಯಾ ರಾಣಿಗೆ ಪ್ರೀತಿಯ ಕಾಣಿಕೆಯಾಗಿ ನೀಡಿದ. ಆದರೆ ಈ ಎಲೆಗಳ ಉಪಯೋಗದಿಂದ ರಾಣಿ ಅನಾರೋಗ್ಯಕ್ಕೊಳಗಾದಳು. ಅವಳು ಬಳಸಿದ ಎಲೆಗಳಲ್ಲಿರುವ ವಿಷದಿಂದ ಹೀಗಾಗಿದೆಯೆಂದು ವೈದ್ಯರು ಹೇಳಿದಾಗ ಶೀಲೆಯನ್ನು ಬಂಧಿಸಿ ಶಿಕ್ಷೆಗೆ ಗುರಿಪಡಿಸಲಾಯಿತು.

ಹತ್ತನೆಯ ಶತಮಾನದ ತನಕ ಭಾರತದಲ್ಲಿ ಆಲೂಗಡ್ಡೆ ಬಳಕೆ ಪಾಪಕರವೆಂಬ ನಂಬಿಕೆ ಇತ್ತು. ಅದು ವಿಷಪೂರಿತವೆಂದು ೧೭ ನೆಯ ಶತಮಾನದ ವರೆಗೆ ಇಂಗ್ಲೇಂಡಿನಲ್ಲಿ ಅದನ್ನು ದೂರವಿರಿಸಿದ್ದರು. ಪಾದ್ರಿಗಳು ಅದಕ್ಕೆ ಮಂತ್ರಜಲ ಸಿಂಪಡಿಸಿ ಒಳ್ಳೆಯ ಹೆಸರಿಟ್ಟ ಮೇಲೆ ಕೃಷಿಗೆ ಆರಂಭಿಸಿದರು. ಬೈಬಲ್‌ನಲ್ಲಿ ಇದರ ಹೆಸರಿರದ ಕಾರಣ ೧೮ ನೆಯ ಶತಮಾನದ ತನಕ ಸ್ಕಾಟ್ಲೆಂಡಿನಲ್ಲಿ ಅಲೂಗಡ್ಡೆಯನ್ನು ಬೆಳೆಸಲಿಲ್ಲ. ಯುರೋಪಿನಲ್ಲಿ ಬಹುಕಾಲದವರೆಗೆ ಬಡವರು ಹೊಟ್ಟೆಹಸಿವಿಗಾಗಿ ತಿನ್ನಬಲ್ಲ ಕ್ಷುಲ್ಲಕ ಆಹಾರವೆಂದು ಧನಿಕರು ಇದನ್ನು ಬದಿಗಿರಿಸಿದ್ದರು.

ಪ್ರಶ್ಯಾದ ರಾಜ ಫ್ರೆಡ್ರಿಕ್ ಆಲೂಗಡ್ಡೆಯ ಬೀಜವನ್ನು ರೈತರಿಗೆ ಪೂರೈಸಿ. ಅದನ್ನು ಸೈನಿಕರ ಕಟ್ಟುಗಾವಲಿನಲ್ಲಿ ಬೇಸಾಯ ಮಾಡಿಸಿ, ಆಲೂಗಡ್ಡೆ ಬೆಳೆಯದಿರುವುದು ಶಿಕ್ಷಾರ್ಹ ಅಪರಾಧವೆಂದು ಸಾರಿದ್ದ. ಆಗ ಈ ವಿಷದ ಗಡ್ಡೆಯನ್ನು ತಿಂದು ಸಾಯಲು ಕೆಲವು ರೈತರು ಸಿದ್ಧರಾಗಿ ರುಚಿಗೆ ಮರುಳಾದರು. ಯುದ್ಧಕಾಲದಲ್ಲಿ ಆಹಾರಧಾನ್ಯಗಳಿಲ್ಲದಾಗ ಆಲೂಗಡ್ಡೆಯನ್ನೇ ಜರ್ಮನರು ತಿಂದು ಬದುಕಿದ್ದರು. ೧೪ನೆಯ ಲೂಯಿಯೊಂದಿಗೆ ಯುದ್ಧ ಮಾಡಿದ ಆಂಗ್ಲಸೈನಿಕರ ಮೂಲಕ ಫ್ರಾನ್ಸಿಗೆ ಆಲೂಗಡ್ಡೆ ಕಾಲಿರಿಸಿದಾಗ ಅದರಿಂದ ಕುಷ್ಠರೋಗ ಬರುವುದೆಂಬ ಸುದ್ದಿ ಹರಡಿತು. ರೈತನೊಬ್ಬ ಬೆಳೆಸಿದ ಆಲೂಗಡ್ಡೆಗಳಿಂದಲೇ ಜನ ಅವನನ್ನು ಚೆನ್ನಾಗಿ ಹೊಡೆದರು.

೧೭೭೦ರಲ್ಲಿ ಫ್ರಾನ್ಸಿನಲ್ಲಿ ಆಹಾರವಸ್ತುಗಳ ಕ್ಷಾಮವುಂಟಾದಾಗ ಸರಕಾರವು ಗೋಧಿಗೆ ಸಮನಾದ ಆಹಾರವಸ್ತುವನ್ನು ಶೋಧಿಸಿದವರಿಗೆ ಬಹುಮಾನ ಕೊಡುವುದಾಗಿ ಸಾರಿತು. ಫ್ರಾನ್ಸಿನ ವಿಜ್ಞಾನಿ ಆಂಟೋಯಿನ್ ಅಗಸ್ಟಿನ್ ಪರಮೇತ್ಯಾರ ೭ ವರ್ಷಗಳಕಾಲ ಕಾಡುಜನರ ಬಂಧಿಯಾಗಿದ್ದಾಗ ಆಲೂಗಡ್ಡೆಯನ್ನೇ ತಿಂದು ಬದುಕಿದ್ದ. ಆತ ಇದೇ ಗೋಧಿಗೆ ಸಮನಾದ ಆಹಾರವೆಂದು ತೋರಿಸಿಕೊಟ್ಟಾಗ ೧೬ನೆಯ ಲೂಯಿ ೫೦ ಎಕ್ರೆ ನೆಲದಲ್ಲಿ ಆಲೂಗಡ್ಡೆ ಬೆಳೆಯಲು ಆಜ್ಞಾಪಿಸಿದ. ಆಗ ಅವನಿಗೆ ಖುಷಿ ತಂದುದು ಗಡ್ಡೆ ಅಲ್ಲ ಅದರ ಹೂವು. ಆಲೂವಿನ ಹೂಗೊಂಚಲು ರಾಣಿ ಆಂಟೊಯಿನೆಟ್‌ಳ ತುರುಬನ್ನು ಅಲಂಕರಿಸಿದಾಗ ಅಲ್ಲಿ ಅದೊಂದು ಫ್ಯಾಷನ್ ಅನಿಸಿತು. ಹೂವಿಗಾಗಿ ಆಲೂಗಿಡ ಬೆಳೆಯುವ ಪದ್ಧತಿ ಕಾಲಿರಿಸಿತು.

ಆಲೂಗಡ್ಡೆಯ ಬಳಕೆಯ ಬಗೆಗೆ ವಿಜ್ಞಾನಿ ಅಗಸ್ಟಿನ್ ಪುಸ್ತಕಗಳನ್ನು ಬರೆದ. ಬೆಂಜಾಮಿನ್ ಫ್ರಾಂಕ್ಲಿನ್‌ನಂಥ ಹಲವು ವಿಜ್ಞಾನಿಗಳನ್ನು ಕರೆಸಿ ಅದರಿಂದ ತಯಾರಿಸಿದ ನಾನಾವಿಧದ ತಿಂಡಿಗಳನ್ನು ಬಡಿಸಿದ. ಆತ ಬಡವರ ಆಹಾರದ ಶೋಧಕನೆಂಬ ಕೀರ್ತಿ ಪಡೆದ. ತರುವಾಯ ಹೊಲಗಳಿಂದ ಆಲೂಗಡ್ಡೆ ಕಳವಾಗುವುದನ್ನು ತಪ್ಪಿಸಲು ಕಾವಲು ಕಾಯಬೇಕಾಯಿತು. ವಿಜ್ಞಾನಿ ಅಗಸ್ಟಿನ್ ಪ್ರತಿವರ್ಷ ತನ್ನ ಪುಣ್ಯದಿನದಂದು ತನ್ನ ಸಮಾಧಿಯ ಮೇಲೆ ಒಂದು ಆಲೂಗಡ್ಡೆಯನ್ನು ಇರಿಸುವಂತೆ ಉಯಿಲು ಬರೆಸಿದ್ದ. ಈಗಲೂ ಅಲ್ಲಿ ಆ ಪದ್ಧತಿ ನಡೆದಿದೆ.



ಅಂಗಿಗುಂಡಿ ಮತ್ತು ತುರುಬಿನಲ್ಲಿ ಆಲೂ ಹೂ ಇರಿಸುವುದು, ಚಳಿಗಾಲದಲ್ಲಿ ಕೈ ಬೆಚ್ಚಗಾಗಲು ಅದನ್ನು ಪರ್ಸುಗಳಲ್ಲಿರಿಸಿ ಕೊಳ್ಳುವುದು ಇಂಗ್ಲೆಂಡಿನ ಲಲನೆಯರ ಫ್ಯಾಷನು ಆಗಿತ್ತು. ಇದರ ಪ್ರಚಾರಕ್ಕಾಗಿ ಸಾಹಿತ್ಯಗಳನ್ನು ರಚಿಸಲು ರಾಣಿ ಎಲಿಜಬೆತ್ ಲೇಖಕರಿಗೆ ಪ್ರೋತ್ಸಾಹ ನೀಡಿದ್ದಳು. ಆಲೂಗಡ್ಡೆಯ ಬೆಳೆಗೆರೋಗ ಬಂದಾಗ ಎಲ್ಲಾ ಇಗರ್ಜಿಗಳಲ್ಲಿ ಅದರ ನಿವಾರಣೆಗಾಗಿ ಪ್ರಾರ್ಥನೆ ಮಾಡಲು ಆದೇಶಿಸಿದಳು. ಯುರೋಪಿನಲ್ಲಿ ಆಲೂಗಡ್ಡೆಯನ್ನು ಬುಟ್ಟಿಗೆ ಸೇರಿಸುವ ಓಟದ ಪಂದ್ಯಗಳು ಜನಪ್ರಿಯವಾಗಿದ್ದವು.

೧೭೭೮ - ೭೯ ರ ನಡುವೆ ಪ್ರಶ್ಯಾ – ಆಸ್ಟ್ರೀಲಿಯಗಳು ಆಲೂಗಡ್ಡೆಗಾಗಿ ಮಾಡಿದ ಯುದ್ಧದಲ್ಲಿ ೨೦ ಸಹಸ್ರ ಜನ ಸತ್ತರು. ೪೩,೫೦ ಸಾವಿರ ಪೌಂಡು ಹಣ ವೆಚ್ಚವಾಗಿತ್ತು.

ಭಾರತಕ್ಕೆ ಇದನ್ನು ಪೋರ್ಚುಗೀಸರು ತಂದು ೧೭ ನೆಯ ಶತಮಾನದಲ್ಲಿ ಕೃಷಿ ಆರಂಭಿಸಿದರು. ೧೬೧೫ ಯಲ್ಲಿ ಸರ್ ಥಾಮಸ್ ರೋ ನೀಡಿದ ಔತಣ ಕೂಟದಲ್ಲಿ ವಿಶೇಷ ಖಾದ್ಯಗಳ ಸಾಲಿನಲ್ಲಿ ಆಲೂಗಡ್ಡೆ ಸೇರಿತ್ತು. ಆರಂಭದಲ್ಲಿ ಭಾರತೀಯರು ಇದನ್ನು ಪವಿತ್ರವಲ್ಲವೆಂದು ತಿಳಿದಿದ್ದರು. ಗಢವಾಲದ ಬ್ರಾಹ್ಮಣರಿಗೆ ಈಗಲೂ ಏಕಾದಶಿಯಂದು ಅದು ವರ್ಜ್ಯ.

ಕೊಲೆರಾಡೊದಲ್ಲಿ ರೈತನೊಬ್ಬ ಬೆಳೆದ ೩ಅಡಿ ೫ ಇಂಚು ಉದ್ದ, ೧೬ ಪೌಂಡು, ೭ ಔನ್ಸ್ ಭಾರದ ಆಲೂಗಡ್ಡೆಯದು ವಿಶ್ವದಾಖಲೆ. ಚೀನಾದಲ್ಲಿ ಒಂದೇ ಗಿಡದಲ್ಲಿ ಆಲೂಗಡ್ಡೆ ಮತ್ತು ಟೊಮ್ಯಾಟೊ ಬೆಳೆ ಸಿಗುವ ಪೊಮೆಟೋ ಎಂಬ ತಳಿಯನ್ನು ಕಂಡುಹಿಡಿದಿದ್ದಾರೆ. ಈಗ ಫೋಟೋ ಫಿಲಂಗಳು, ಮಾದಕವಸ್ತುಗಳು, ಖಾದ್ಯ ಪದಾರ್ಥಗಳು, ಪಶು ಆಹಾರ ಆಲೂಗಡ್ಡೆಯಿಂದ ಸಿದ್ಧವಾಗುತ್ತವೆ. ಆಲೂಗಡ್ಡೆಯನ್ನು ಮರಾಠಿ ಮತ್ತು ಕನ್ನಡದಲ್ಲಿ ಬಟಾಟೆ ಎಂದು ಕರೆಯುವ ಹೆಸರು ಹೇವೇ ದ್ವಿಪದಿಂದ ಬಂದಿದೆ.



## ವಿದ್ಯಾರ್ಥಿ ಜೀವನದ ಬೆಳಕು ಸರಣಿ-ಗಲ.

ಡಿ॥ ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸ ರಸ್ತೆ, ಮೈಸೂರು-570024.

**ಆತ್ಮಾವಲಂಬನೆ:** ಅಂದರೆ ಯಾರ ನೆರವೂ ಇಲ್ಲದೆ ಸ್ವತಂತ್ರವಾಗಿ ಜೀವನ ಸಾರ್ಥಕ್ಯ ಪಡಿಸಿಕೊಳ್ಳುವುದು. ವಿದ್ಯಾವಂತರಾದವರು ತಾವು ಸ್ವತಃ ದುಡಿದರೆ ಅಪಮಾನವೆಂದು ತಿಳಿದಿರುತ್ತಾರೆ. ತಾನು ವಿದ್ಯಾಪಾರಂಗತನಾಗಿದ್ದು ದುಡಿಯಬೇಕು? ನೋಡಿದವರು ನಗುವುದಿಲ್ಲವೇ ಎಂದು ತನ್ನ ಹೆಮ್ಮೆಯನ್ನು ಪ್ರದರ್ಶಿಸುತ್ತಾನೆ. ಇದು ಕೀಳು ಅಭಿಪ್ರಾಯ, ತನ್ನ ಸ್ವಂತ ಕೆಲಸ ಮಾಡಿಕೊಳ್ಳುವುದರಿಂದ ಆತ್ಮತೃಪ್ತಿ ಬರುತ್ತದೆ. ತನ್ನ ಕಾಲುಗಳ ಮೇಲೆ ತಾನೇನಿಲ್ಲ ಬೇಕಲ್ಲವೇ. ?

ಕೆಲವರು ಪೂರ್ಣ ವಿದ್ಯಾವಂತಾರಾದರೂ ದುಡಿದು ತಿನ್ನುವ ಮನೋಭಾವ ಹೊಂದಿರುತ್ತಾರೆ. ಅವರಿಗೆ ಯಾವುದೇ ಚಾಕರಿ ಸಿಗಲಿಲ್ಲವೆಂದು ಕೊರಗುತ್ತಾ ಸುಮ್ಮನೆ ಕೂಡುವುದಿಲ್ಲ. ಇನ್ನು ಕೆಲವರು ತಮಗೆ ಉಚಿತವಾದ ಸ್ಥಾನ ಮಾನವುಳ್ಳ ಕೆಲಸ ಸಿಗಲಿಲ್ಲವೆಂದು ತಮ್ಮ ನೋವನ್ನು ಹೊರಗೆ ತೋರ್ಪಡಿಸಿರುತ್ತಾರೆ. ಹಿರಿಯರು ತಮಗೆ ಹಣವನ್ನಾಗಲಿ ಆಸ್ತಿಯನ್ನಾಗಲಿ ಇಡದೆ ಮೃತ್ಯುವಶರಾದರು. ಅವು ಇದ್ದಿದ್ದರೆ ಅದನ್ನಾದರೂ ಬಳಸಿ ವ್ಯಾಪಾರವನ್ನೋ, ಅಥವಾ ಗಿರಣಿ, ಫ್ಯಾಕ್ಟರಿಗಳನ್ನು ಸ್ಥಾಪಿಸಿ ಹಣ ಗಳಿಸಬಹುದಾಗಿತ್ತು ಎಂದು ಕೊರಗುತ್ತಾರೆ. ಇದು ಮೂರ್ಖರ ಲಕ್ಷಣ.

ಅಮೇರಿಕಾದ ಜೇಮ್ಸ್ ಅಬ್ರಹಾಂಗಾರ್‌ಫೀಲ್ಡ್, ರಾಮ್ಸೆ ಮೆಕ್ ಡೊನಾಲ್ಡ್ ಮೊದಲಾದ ಮಹನೀಯರು ತಾವು ಸ್ವತಃ ಕೂಲಿಯವರು ದುಡಿಯುವಂತೆ ಶ್ರಮ ವಹಿಸಿದುಡಿದು ಪ್ರಸಿದ್ಧಿಗೆ ಬಂದವರು ನಮ್ಮ ಭಾರತದ ಶ್ರೀಯುತರಾದ ಬಾಲ ಗಂಗಾಧಾರ ತಿಲಕ್, ಗೋಪಾಲ ಗೋಖಲೆ ಮೊದಲಾದ ಮಾನ್ಯರೂ ಸಹ ಬಡತನದಲ್ಲಿ ಹುಟ್ಟಿ ಆತ್ಮಾಲಂಬನೆಯಿಂದಲೇ ಪ್ರಸಿದ್ಧಿಗೆ ಬಂದವರು. ಸ್ಥಿರ ಸಂಕಲ್ಪವುಳ್ಳವರಾಗಿ ಭಾರತೀಯರ ಅಭ್ಯುದಯಕ್ಕಾಗಿ ಹೋರಾಡಿ ಎಲ್ಲರಿಂದಲೂ ಶ್ಲಾಘನೆಗೆ ಪಾತ್ರರಾದರು.

ಆತ್ಮಾವಲಂಬನೆಯಿಂದ ಜೀವಿಸುವವರಿಗೆ ಯಾರ ಭಯವಾಗಲಿ, ಚಿಂತೆಯಾಗಲಿ ಇರುವುದಿಲ್ಲ. ಸ್ವತಂತ್ರ ಮಾರ್ಗದಿಂದ ದುಡಿದು, ಸಂಪಾದಿಸಿ ಜೀವಿಸುತ್ತಾರೆ. ಇದೇ ಅವರಿಗೆ ಹಿತವೂ ಸಂತಸವೂ ಆಗಿರುತ್ತದೆ. ಯಾರಿಗೂ ತಗ್ಗಿ ನಡೆಯುವ ಮನಸ್ಸು ಬಾರದು. ಇದನ್ನು 'ಸ್ವಸಹಾಯ ಜೀವನ ಕ್ರಮ" ಎನ್ನಬಹುದು. ಇವರಿಗೆ ಅಲ್ಪತೃಪ್ತಿ ಇರುತ್ತದೆ. ಪರಮಾತ್ಮನು ಹೆಚ್ಚು ಕೊಡಲಿಲ್ಲವೆಂದು ಚಿಂತಿಸುವುದಿಲ್ಲ. ಇಂಥವರಿಗೆ ಮನೋಶಾಂತಿಯಿರುತ್ತದೆ ಯಾದ ಕಾರಣ ಜೀವನಸುಖವಿರುತ್ತದೆ.



ಆತ್ಮಾವಲಂಬನೆಗೆ ಒಂದು ಉದಾಹರಣೆಯನ್ನು ಹೇಳಬಹುದು. ಓಬ್ಬ ರೈತನ್ನ ಎತ್ತಿನ ಗಾಡಿಯನ್ನು ಹೊಡೆದುಕೊಂಡು ಪಕ್ಕದಹಳ್ಳಿಗೆ ಹೋಗುತ್ತಿದ್ದ. ಹಿಂದಿನದಿನ ಮಳೆ ಬಂದಿತ್ತು. ರಸ್ತೆಯು ಮಣ್ಣುನೆಂದು ಜಾರಿಕೆಯಾಗಿತ್ತು. ಮಣ್ಣು ಅಂಟಾಗಿತ್ತು. ಸಾಮಾನುಗಳಿಂದ ಭರ್ತಿಯಾಗಿದ್ದ ಗಾಡಿಯ ಭಾರ ಅಧಿಕವಾಗಿತ್ತು, ಗಾಡಿಯ ಚಕ್ರಗಳು ಅಂಟು ಮಣ್ಣಿನಲ್ಲಿ ಹೂತು ಹೋದವು. ಅಕ್ಕಪಕ್ಕಗಳಲ್ಲಿ ಜನರಾರೂ ಇರಲಿಲ್ಲ. ಗಾಡಿಯವನು ತಲೇಮೇಲೆ ತನ್ನ ಕೈಗಳನ್ನು ಹೊತ್ತು, ದೇವರನ್ನು ಸ್ಮರಿಸಿ 'ಭಂಗವಂತಾ! ನನ್ನಗತಿ ಹೀಗಾಯಿತು! ಏನುಮಾಡಲಿ? ಇನ್ನು ನನಗೆದಿಕ್ಕಾರು? ಊರು ಸೇರುವುದು ಹೇಗೆ ಎಂದು ಗೋಳಾಡುತ್ತಿದ್ದನು. ರೈತನ ಈ ಆಕ್ರಂದನದಿಂದ ಹೂತು ಹೋದ ಚಕ್ರಗಳು ತಮಗೆ ತಾವೇ ಮೇಲೆದ್ದು ಬರುತ್ತವೆಯೋ ?

ಕೂತು ಅವನಿಗೆ ಬೇಸರವೂ ಬಂದಿತ್ತು, ಕತ್ತಲಾಗುತ್ತಿದೆ. ಜನರ ಸಂಚಾರವಿಲ್ಲ. ಏನುಗತಿ ? ಯಾರೂ ನನಗೆ ಸಹಾಯಕರಿಲ್ಲವಲ್ಲಾ! ಮನೆಸೇರುವುದು ಹೇಗೆ ? ಕಳ್ಳರು ಬಂದು ನನ್ನ ಗಾಡಿಯಲ್ಲಿರುವ ಸಾಮಾನುಗಳನ್ನು ದೋಚಿಕೊಂಡು ಹೋದರೆ ಮಾಡುವುದೇನೆಂದು ಕನಲಿ ಕ್ಷಣ ಸುಮ್ಮನೆ ಚಿಂತೆಯಿಂದ ಕುಳಿತಿದ್ದನು.

ಕಟ್ಟಕಡೆಗೆ ಅವನಿಗೆ ಸ್ಫೂರ್ತಿಬಂದಿತು, ಕುಳಿತಿದ್ದವನೆದ್ದು, ದೇವರ ಮೇಲೆ ಭಕ್ತಿಯುಕ್ಕಿ ಬಂದು, ಹೂತು ಹೋಗಿದ್ದ ಚಕ್ರಗಳನ್ನು ಒಂದೆಪಟ್ಟಿಗೆ ಜಗ್ಗಿಸಿ ಮೇಲೆತ್ತಿದನು, ಚಕ್ರಗಳು ಸಡಿಲವಾಗಿ ಮೇಲೆದ್ದು ಬಂದವು. ರೈತನಿಗೆ ಸಂತೋಷವಾಯಿತು. ಹೀಗೆ ಮಾಡದೆ ಅವನು ಎಷ್ಟೇದಿನಗಳು ಕುಳಿತಿದ್ದರೂ ಮನೆ ಸೇರುತ್ತಿರಲಿಲ್ಲ. ಇದನ್ನೇ ಸ್ವಸಹಾಯ ಪದ್ಧತಿ ಎಂದನ್ನುತ್ತಾರೆ. ಆತ್ಮಾವಲಂಭಿಗಳಿಗೆ ದೇವರ ಸಹಾಯವಿರುತ್ತದೆ.

ತನ್ನ ಕರ್ತವ್ಯ ಪಾಲನೆಯಿಂದಲೇ ಜಯ ಲಭಿಸುತ್ತದೆ. ಆತ್ಮಾವ ಲಂಬಿಗಳು ಸುಖವನ್ನು ಪಡೆಯುವುದರಲ್ಲಿ ಸಂಶಯವಿರುವುದೇ ?



# ಗ್ರಾಮಾಂತರ ಬಸವಜಯಂತಿ

— ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣಬಂಧು,

ಬಹಳ ದಿನಗಳಾಯಿತು ಬರೆದು. ಅಂದಾಕ್ಷಣ ನಿನ್ನನ್ನು ಮರೆತೆನೆಂದಲ್ಲ. ಪರಮ ಪೂಜ್ಯ ಶ್ರೀ ಶ್ರೀಗಳವರ ಸೇವಾಮಣಿಹದಲ್ಲಿ ಭಾಗಿಯಾಗುವ ಭಾಗ್ಯದ ನಡುವೆ ಬರೆಯಲು ಕೊಂಚ ವಿಳಂಬವಾಯಿತು. ಪೂಜ್ಯ ಸ್ವಾಮೀಜಿಯವರಿಗಂತೂ ಬಸವ-ತತ್ವಗಳ ಪ್ರಸಾರ, ಪ್ರಚಾರ ಹೆಚ್ಚು ಹೆಚ್ಚಾಗಿ ಆಗಬೇಕು ಎಂಬುದೇ ಅಪೇಕ್ಷೆ. ಅದಕ್ಕಾಗಿ 85ರ ತುಂಬು ವಯಸ್ಸಿನಲ್ಲೂ ಹಗಲು ಇರುಳು ಎನ್ನದೆ ಶ್ರಮಿಸುತ್ತಿದ್ದಾರೆ ದೇಹಾರೋಗ್ಯವನ್ನು ಲೆಕ್ಕಿಸುತ್ತಿಲ್ಲ, ಪ್ರತಿನಿತ್ಯ ನೂರಾರು ಕಿಲೋಮೀಟರ್‌ಗಳ ಪ್ರವಾಸ ಮಾಡಿದ್ದರೂ "ಬಸವಮಣಿಹ"ದಲ್ಲಿ ನೇತೃತ್ವವಹಿಸುತ್ತಾರೆ. ವಿದ್ವಾಂಸರನ್ನು ಕರೆಸುವುದು, ನಾಟಕದ ಸಿದ್ಧತೆಮಾಡುವುದು, ಗ್ರಾಮೀಣ ಬಂಧುಗಳ ಆಮಂತ್ರಣವನ್ನು ಅಂಗೀಕರಿಸುವುದು, ಜಯಂತಿಯ ಆಚರಣೆಯಲ್ಲಿ ಪಾಲ್ಗೊಳ್ಳುವುದು, ಗಂಟೆಗಟ್ಟಲೆ ಉಪನ್ಯಾಸಮಾಡುವುದು, ನಿರಂತರವಾಗಿ ಬಸವ ಸೇವೆಯಲ್ಲಿ ನಡೆದಿದ್ದಾರೆ. ಗ್ರಾಮೀಣ ಬಂಧುಗಳಲ್ಲಿ ನವಜಾಗೃತಿಯನ್ನು ಉಂಟುಮಾಡುತ್ತಿದ್ದಾರೆ. ಬಸವಣ್ಣನ ಬಗ್ಗೆ ಜನಾಂಗ ಆಲೋಚಿಸುವಂತೆ ಶ್ರಮಿಸುತ್ತಿದ್ದಾರೆ.

ಈವರ್ಷ ಕಾರ್ಯಕ್ರಮಗಳು ಹೀಗೆ ನಡೆದಿವೆ.

19–1–92 ತುಮಕೂರು, ಕೋರಿ ಕುಟುಂಬದವರ ಸೇವೆ

8–2–92 ಕೆರಗೋಡು-ಹೊಳೆನರಸೀಪುರ ತಾ||. ಸಚಿವ ಪುಟ್ಟಸ್ವಾಮಿಗೌಡರ ಸೇವೆ.

10-2-92 ಓರೋಹಳ್ಳಿ, ಹೊಸಕೋಟೆ ತಾ||. ಗ್ರಾಮ ಬಂಧುಗಳ ಸೇವೆ

17-2-92 ಮಾದಿಹಳ್ಳಿ, ಅರಕಲಗೂಡು ತಾ|| ಹಾಸನಜಿಲ್ಲೆ ಗ್ರಾಮಬಂಧುಗಳ ಸೇವೆ.

18–2-92 ಕಾಮನಕೆರೆ ಕಡೂರು ತಾಲ್ಲೂಕು ಗ್ರಾಮ ಬಂಧುಗಳ ಸೇವೆ.

25–2–92 ಶ್ರೀ ಮಠ ಜಾತ್ರಾ ಪ್ರಯುಕ್ತ ಸೇವೆ.

2–3-92 ಶ್ರೀಮಠದ ಶಿವರಾತ್ರಿ ಜಾಗರಣೆ ಪ್ರಯುಕ್ತ ಸೇವೆ.

12-3–92 ದೊಡ್ಡಗುಣಿ, ಗುಬ್ಬಿ ತಾ||. ಪ್ರೌಢಶಾಲಾ ಬೆಳ್ಳಿಹಬ್ಬದ ಸವಿನೆನಪಿಗಾಗಿ ಗ್ರಾಮ ಬಂಧುಗಳಸೇವೆ.

17–3–92 ಕಾರ್ಜುವಳ್ಳಿ, ಆಲೂರು ತಾ|| ಹಾಸನ ಜಿಲ್ಲೆ. ಗ್ರಾಮ ಬಂಧುಗಳ ಸೇವೆ

20-3-92 ರಘುವನಹಳ್ಳಿ, ಬೆಂಗಳೂರು ಶ್ರೀ ಚಿಕ್ಕವೀರಪ್ಪನವರ ಸೇವೆ.

22-3-92 ಗಾವುಡಗೆರೆ, ಹುಣಸೂರು ತಾ|| ಗುರುಲಿಂಗಜಂಗಮ ಮಠದ ಪೂಜ್ಯ ಶ್ರೀ ನಟರಾಜಸ್ವಾಮಿಗಳು ಮತು ಭಕ್ತಾದಿಗಳ ಸೇವೆ.

24-3-92 ಹಿರೇಬೆಳಗುಲಿ, ಹೊಳೆನರಸೀಪುರ ತಾ||. ಗ್ರಾಮ ಬಂಧುಗಳ ಸೇವೆ.

29–3-92 ನೆಲಮಂಗಲ, ಶ್ರೀ ಪವಾಡಬಸವಣ್ಣ ದೇವರ ಮಠದ ಪೂಜ್ಯ ಶ್ರೀ ಸದಾಶಿವಸ್ವಾಮಿಗಳು ಮತ್ತು ಭಕ್ತಾದಿಗಳ ಸೇವೆ.

6-4-92 ಬ್ಯಾಲಕೆರೆ, ಮಾಗಡಿ ತಾ||. ಗ್ರಾಮ ಬಂಧುಗಳ ಸೇವೆ.

9–4–92 ಬೀರನಕಲ್ಲು, ತುಮಕೂರು ತಾ||. ಗ್ರಾಮ ಬಂಧುಗಳ ಸೇವೆ.

13–4-92 ಕೈಕೊಂಡ್ರಹಳ್ಳಿ, ಬೆಂಗಳೂರು ಸಮೀಪ ಗ್ರಾಮ ಬಂಧುಗಳ ಸೇವೆ.

# ಕ್ಷೇತ್ರ ವಾರ್ತೆ

— ಎಂ. ರೇಣುಕಾರಾಧ್ಯ

ಸಿದ್ಧಗಂಗಾ ಶ್ರೀ ಶ್ರೀ ಗಳವರ 85 ನೇ ಗುರುವಂದನಾ ಸಮಾರಂಭವು ದಿನಾಂಕ 1-4-92 ರಂದು ಸಿರಿಗೆರೆಯ ತರಳಬಾಳು ಬೃಹನ್ಮಠದ ಡಾ|| ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ರಾಜ್ಯದ ಮುಖ್ಯ ಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಬಂಗಾರಪ್ಪನವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಅವರು ಮಾತನಾಡುತ್ತಾ ಧರ್ಮ, ಭಾಷೆ, ಆಚರಣೆಗಳಲ್ಲಿ ವೈವಿಧ್ಯತೆ ಹೊಂದಿರುವ ಭಾರತೀಯ ಸಮಾಜ ವ್ಯವಸ್ಥೆಯ ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಕಂಡು ಹಿಡಿಯಲು ಶ್ರಮಿಸುತ್ತಿರುವ ಮಹಾನ್ ಚೇತನ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಎಂದು ವರ್ಣಿಸಿದರು.

ಧಾರ್ಮಿಕ, ಸಾಮಾಜಿಕ, ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಅವರು ನೀಡಿರುವ ನೀಡುತ್ತಿರುವ ಕೊಡುಗೆ ಅಪಾರ. ಸಮಗ್ರ ಸಮಾಜದ ಪರಿವರ್ತನೆಗಾಗಿ ಜೀವನ್ನ ದುದ್ದಕ್ಕೂ ಪೂಜ್ಯರು ಪ್ರಾಮಾಣಿಕವಾಗಿ ಪ್ರಯತ್ನ ನಡೆಸಿದ್ದಾರೆ ಎಂದು ಮುಖ್ಯಮಂತ್ರಿಗಳು ಹೇಳಿದರು.

ಸಿದ್ಧಗಂಗಾಮಠ ದೇಶದ ಅದ್ವಿತೀಯ ಮಠವಾಗಿದೆ. ಇದು ಇನ್ನೂ ಹೆಚ್ಚು ಬೆಳೆದು ನಾಡಿನ ಅಶಕ್ತ ಮಕ್ಕಳಿಗೆ ವಿದ್ಯೆ, ಮಾರ್ಗದರ್ಶನ ನೀಡುತ್ತಾ ಸರ್ವಧರ್ಮ ಸಮಭಾವದ ಬಸವಣ್ಣನವರ ತತ್ವಗಳನ್ನು ಮುನ್ನಡೆಸುವ ಹೆಮ್ಮರವಾಗಲಿ ಎಂದು ಮುಖ್ಯಮಂತ್ರಿಗಳು ಹಾರೈಸಿದರು.

ಸಮಾರಂಭದಲ್ಲಿ ಉಪಸ್ಥಿತರಿದ್ದ ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳು ಮಾತನಾಡುತ್ತಾ ಸಮಾಜ, ಜನಾಂಗ ಹಾದಿತಪ್ಪದಂತೆ ನೋಡುವ ಹೊಣೆ ಮಠಗಳ ಮೇಲಿದೆ. ಧರ್ಮ ಎಂಬುದು ಬದುಕಿನ ಜ್ಯೋತಿ ಎಂದು ಯುವಜನರಿಗೆ ಮನದಟ್ಟು ಮಾಡುವ ಅಗತ್ಯವಿದೆ. ಶ್ರೀ ಶಿವಕುಮಾರ ಸ್ವಾಮಿಗಳವರ ತ್ರಿವಿಧ ದಾಸೋಹ ಈ ದಿಶೆಯಲ್ಲಿ ಸರಿಯಾದ ಹೆಜ್ಜೆಯಾಗಿದೆ ಎಂದು ತಮ್ಮ ಭಕ್ತಿ ಸಮರ್ಪಿಸಿದರು.

ಅಧ್ಯಕ್ಷ ಪೀಠದಿಂದ ತರಳಬಾಳು ಶ್ರೀಗಳವರು, ಧರ್ಮ, ಮತ್ತು ರಾಜಕೀಯ ಜೊತೆಜೊತೆಯಾಗಿ ಹಾಗೂ ಪರಸ್ಪರ ಪೂರಕವಾಗಿ ಕಾರ್ಯನಿರ್ವಹಿಸಿದರೆ ಸಾಮಾಜಿಕ ಸುಧಾರಣೆ ತರಲು ಸಾಧ್ಯವಾಗುತ್ತದೆ ಎಂದು ಅಭಿಪ್ರಾಯಪಟ್ಟರು.

ಸ್ವಾತಂತ್ರ್ಯಪೂರ್ವ ಹಾಗೂ ನಂತರದ ಸಮಾಜವನ್ನು ಹತ್ತಿರದಿಂದ ಕಂಡಿರುವ ಶ್ರೀ ಶಿವಕುಮಾರ ಸ್ವಾಮೀಜಿಯವರು ಮೇರು ಸದೃಶ ವ್ಯಕ್ತಿಯಾಗಿದ್ದು ಸಮಾಜಕ್ಕೆ ತಮ್ಮನ್ನು ಪರಿಪೂರ್ಣವಾಗಿ ಸಮರ್ಪಿಸಿಕೊಂಡಿದ್ದಾರೆ ಎಂದು ಶ್ಲಾಘಿಸಿದರು.

ಪರಮಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳವರು ಸಮಾರಂಭದಲ್ಲಿ ಆಶೀರ್ವಚನ ನೀಡಿ, ದೇಶದಲ್ಲಿಂದು ನೈತಿಕತೆ ಅಧಃಪತನವಾಗುತ್ತಿರುವುದಕ್ಕೆ ವಿಷಾದಿಸಿದರು. ವಿನಾಶದ ಅಂಚಿನಲ್ಲಿರುವ ಜನರನ್ನು ಜಾಗೃತಗೊಳಿಸಿ ಮನುಷ್ಯ ಮನುಷ್ಯನಾಗಿ ಬಾಳುವಂತೆ ಮಾಡಬೇಕಾಗಿದೆ. ವಿಜ್ಞಾನದ ಪರಿಣಾಮವಾಗಿ ಮನುಷ್ಯ ದಾರಿ ತಪ್ಪಿ ಅಸುರೀ ಉಪಾಸಕನಾಗಿದ್ದಾನೆ. ಆತನನ್ನು ಅಜ್ಞಾನ ಅಹಂಕಾರದ ಮಾರ್ಗದಿಂದ ವಿಮುಖನಾಗಿಸುವ ಕಾರ್ಯಕ್ರಮ ಹಮ್ಮಿಕೊಳ್ಳಬೇಕಾಗಿದೆ ಎಂದರು.

ಎಲ್ಲವನ್ನು ಸಾಧಿಸುವ ಮಾನವನ ಅಹಂನಿಂದ ಅನೇಕ ಅನರ್ಥಗಳು ನಡೆದಿವೆ. ಸಾಮಾಜಿಕ, ನೈತಿಕ, ಜೀವನ ಪತನಗೊಳ್ಳುತ್ತಿವೆ. ಮಾನವೀಯತೆ ಹಾಳಾಗುತ್ತಿದೆ. ಇದನ್ನು ಸರಿಪಡಿಸಲು ಪ್ರಾಮಾಣಿಕ ಯತ್ನ ಬೇಕು. ಹಿಂದಿನಿಂದಲೂ ಧರ್ಮಪೀಠಗಳು ಈ ದಿಶೆಯಲ್ಲಿ ಸಾಕಷ್ಟು ಶ್ರಮಿಸಿವೆ ಎಂದು ಪೂಜ್ಯರು ನುಡಿದರು.

ಅಸುರೀ ಶಕ್ತಿ ಕಡಿಮೆ ಮಾಡಿಕೊಂಡು ದೈವೀಕಶಕ್ತಿ ಬೆಳೆಸಿಕೊಳ್ಳಬೇಕು ಎಂದು ಕರೆನೀಡಿದ ಸ್ವಾಮೀಜಿ ಅಪಾಯದ ಅಂಚಿನಲ್ಲಿರುವ ಪ್ರಪಂಚವನ್ನು ಪಾರುಮಾಡಲು ಶಿಕ್ಷಕ ಹಾಗೂ ತಾಯಿಗೆ ಮಾತ್ರ ಸಾಧ್ಯ. ಒಳ್ಳೆಯ ಜನಾಂಗ ಸೃಷ್ಟಿಯಲ್ಲಿ ಇವರಿಬ್ಬರ ಪಾತ್ರ ಮಹತ್ವದ್ದು ಎಂದು ತಿಳಿಸುತ್ತಾ ರಾಜಕೀಯ ಮತ್ತು ಧಾರ್ಮಿಕ ಪ್ರತ್ಯೇಕವಾದವುಗಳಲ್ಲ. ಇವುಗಳು ಒಂದಕ್ಕೊಂದು ಪೂರಕವಾಗಿರಬೇಕು ಎಂದು ಮಹಾತ್ಮಗಾಂಧಿ ಹೇಳಿದ್ದಾರೆ. ತ್ಯಾಗಿಗಳು, ಅಧ್ಯಾತ್ಮ ಜೀವಿಗಳು, ಯೋಗ್ಯರು ರಾಜಕೀಯದಿಂದ ದೂರವಾಗಿರುವುದಕ್ಕೆ ಶ್ರೀಗಳು ವಿಷಾದ ವ್ಯಕ್ತಪಡಿಸಿದರು.

ಇದೇ ಸಂದರ್ಭದಲ್ಲಿ ದಾವಣಗೆರೆಯ ಶ್ರೀ ಶ್ಯಾಮನೂರು ಶಿವಶಂಕರಪ್ಪ, ಬೆಂಗಳೂರಿನ ಖ್ಯಾತವೈದ್ಯ ಡಾ. ಟಿ.ಬಿ. ಬಸವರಾಜೇಂದ್ರ, ದಾನಿಗಳಾದ ಶ್ರೀ ಎಂ. ಮರಿಶಾಮಪ್ಪ, ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ ಅವರುಗಳನ್ನು ಸನ್ಮಾನಿಸಲಾಯಿತು.



ಸಮಾರಂಭದಲ್ಲಿ ಪಿ. ಬಸವಣ್ಣ ವಿರಚಿತ ಶ್ರೀ ಶಿವಕುಮಾರ ಚರಿತಂ ಪುಸ್ತಕದ ಎರಡನೇ ಆವೃತ್ತಿಯನ್ನು ಕರ್ನಾಟಕ ವಿಶ್ವವಿದ್ಯಾಲಯ ಸಂಸ್ಕೃತ ವಿಭಾಗದ ಮಾಜಿ ಮುಖ್ಯಸ್ಥರಾದ ಡಾ|| ಕೆ. ಕೃಷ್ಣಮೂರ್ತಿ ಅವರು ಬಿಡುಗಡೆ ಮಾಡಿದರು.

ಶ್ರೀ ಶ್ರೀಗಳವರ ವಜ್ರಮಹೋತ್ಸವ ಪ್ರತಿಷ್ಠಾನದ ಅಧ್ಯಕ್ಷರಾದ ಖ್ಯಾತ ನೇತ್ರದಾನಿ ಡಾ|| ಎಂ. ಸಿ. ಮೋದಿ, ರಾಜ್ಯ ಸಭಾ ಸದಸ್ಯ ಶ್ರೀ ಜಯದೇವಪ್ಪ, ವಿಧಾನ ಪರಿಷತ್ ಸದಸ್ಯರುಗಳಾದ ಶ್ರೀ ವೀರಭದ್ರಪ್ಪ, ಶ್ರೀ ಟಿ. ನಾರಾಯಣಸ್ವಾಮಿ ವಜ್ರಮಹೋತ್ಸವ ಸಮಿತಿ ಕಾರ್ಯಾಧ್ಯಕ್ಷ ಶ್ರೀ ಬಿ. ಎಸ್. ಮುದ್ದಪ್ಪ, ಅನೇಕ ಹರಗುರು - ಚರಮೂರ್ತಿಗಳು ಮತ್ತು ಜಿಲ್ಲಾಧಿಕಾರಿ ಶ್ರೀ ಡಿ. ಸತ್ಯಮೂರ್ತಿ ಜಿಲ್ಲಾ ಪರಿಷತ್ ಮುಖ್ಯ ಕಾರ್ಯದರ್ಶಿ ಶ್ರೀಮತಿ ಅಮಿತಾಪ್ರಸಾದ್ ಮುಂತಾದವರು ಉಪಸ್ಥಿತರಿದ್ದರು.

ಗುರುಕುಲದ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆಯೊಂದಿಗೆ ಆರಂಭವಾದ ಸಮಾರಂಭದಲ್ಲಿ ಶ್ರೀಮಠದ ವಿಶೇಷಾಧಿಕಾರಿಗಳಾದ ಶ್ರೀ ಕೆ. ಎಂ. ರೇವಣಸಿದ್ದಯ್ಯ ಸ್ವಾಗತಿಸಿದರು, ಕ.ಸಾ. ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಗೊ.ರು. ಚನ್ನಬಸಪ್ಪ ಕಾರ್ಯಕ್ರಮ ನಿರೂಪಿಸಿದರು, ಶ್ರೀ ಹೆಚ್. ವಿ. ವೀರಭದ್ರಯ್ಯ ವಂದಿಸಿದರು.

ಪ್ರಾರಂಭದಲ್ಲಿ ಪೂಜ್ಯರು ಹಾಗೂ ಮುಖ್ಯ ಮಂತ್ರಿ ಶ್ರೀ ಬಂಗಾರಪ್ಪನವರನ್ನು ಮತ್ತು ಇತರ ಗಣ್ಯರನ್ನು ಸಮಾರಂಭಕ್ಕೆ 85 ಪೂರ್ಣ ಕುಂಭಗಳನ್ನು ಹೊತ್ತ ಶ್ರೀ ಮಠದ ಶಿಕ್ಷಕ ತರಬೇತಿ ಸಂಸ್ಥೆಯ ವಿದ್ಯಾರ್ಥಿನಿಯರು ಮತ್ತು ಖ್ಯಾತ ಜಾನಪದ ಕಲಾವಿದ ಶ್ರೀ ಎಚ್. ಎಸ್. ನೀಲಕಂಠಯ್ಯನವರ ವೀರಭದ್ರ ನೃತ್ಯ ತಂಡದವರೊಂದಿಗೆ ವೇದಿಕೆಗೆ ಕರೆತರಲಾಯಿತು.

ಸಂಜೆ 5 ಘಂಟೆಗೆ ಶಿವಾನುಭವ ಗೋಷ್ಠಿಯನ್ನು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ಏರ್ಪಡಿಸಿತ್ತು. ಬೆಂಗಳೂರಿನ ಶ್ರೀ ಬೇಲಿಮಠದ ಪರಮಪೂಜ್ಯ ಶಿವಾನುಭವ ಚರಮೂರ್ತಿ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಕ.ವಿ.ವಿ. ನಿಲಯದ ನಿವೃತ್ತ ಪ್ರಾಧ್ಯಾಪಕ ಡಾ. ಕೆ. ಕೃಷ್ಣಮೂರ್ತಿಗಳು, ಕ. ಸಾ. ಪ ಅಧ್ಯಕ್ಷ ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯನವರು ಮತ್ತು ಕ.ವಿ.ವಿ. ಪ್ರಾಧ್ಯಾಪಕರಾದ ಡಾ|| ಗುರುಲಿಂಗಕಾಪಸೆ ಅವರುಗಳು ಉಪನ್ಯಾಸ ನೀಡಿದರು. ಅಧ್ಯಕ್ಷ ಪೀಠದಿಂದ ಶ್ರೀ ಶಿವರುದ್ರಸ್ವಾಮಿಗಳು ಈ ಮೇಲಿನ ವಿದ್ವಾಂಸರುಗಳು ನೀಡಿದ ವಿವಿಧ ವಿಷಯಗಳನ್ನು ಕ್ರೋಢೀಕರಿಸಿ ಸಮಾರೋಪಭಾಷಣ ನೀಡಿದರು.

ಸಮಾರಂಭಕ್ಕೆ ವಿವಿಧ ಭಾಗಗಳಿಂದ 25 ಸಹಸ್ರಕ್ಕೂ ಹೆಚ್ಚು ಭಕ್ತಾಭಿಮಾನಿಗಳು ಸಮಾವೇಶಗೊಂಡಿದ್ದು ಶೋಭೆ ತಂದಿತ್ತು.

"SIDDGANGA" MONTHLY Reg. No. KRNQ-9

ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.